# 'ಜೇಂಗೊಡ' ಕವನ ಸಂಕಲನ ಬಿಡುಗಡೆಯ ಸಮಾರಂಭ

-ಬಿ. ಆರ್. ರಾಮೇಗೌಡ

ಡಿಸೆಂಬರ್ 4ರ ಸೋಮವಾರ ಸಂಜೆ 5-30ಕ್ಕೆ ವಿ. ರಾಣಿ ಗೋವಿಂದರಾಜು ಅವರು ದ್ವಿತೀಯ ಕವನ ಸಂಕಲನ 'ಜೇಂಗೊಡ'ದ ಬಿಡುಗಡೆಯ ಸಮಾರಂಭವನ್ನು ಚಾಮರಾಜಪೇಟೆಯ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಪುಸ್ತಕದ ಬಿಡುಗಡೆಗೆ ಮುನ್ನ ಕನ್ನಡ ಸಾಹಿತ್ಯ ಪರಿಷತ್ತಿನ ಬೆಂಗಳೂರು ನಗರ ಜಿಲ್ಲಾ ಘಟಕದ ಅಧ್ಯಕ್ಷರಾದ ಶ್ರ. ದೇ. ಪಾರ್ಶ್ವನಾಥ್ ಸಮಾರಂಭದ ಉದ್ಘಾಟನಾ ಭಾಷಣ ಮಾಡಿದರು. ಆ ನಂತರ ಖ್ಯಾತ ವಿದ್ಯಾಸಂಸ್ಥೆ ಶೇಷಾದ್ರಿಪುರಂ ವಿದ್ಯಾಸಂಸ್ಥೆಯ ಕಾರ್ಯದರ್ಶಿಯವರಾದ ಡಬ್ಲ್ಯು.ಪಿ. ಕೃಷ್ಣ ಅವರು 'ಜೇಂಗೊಡ' ಕವನ ಸಂಕಲನ ಬಿಡುಗಡೆ ಮಾಡಿದರು ಈ ಸಂದರ್ಭದಲ್ಲಿ ಮಾತನಾಡುತ್ತ ಕವನ ಸಂಕಲನದ ಕವಯಿತ್ರಿ ವಿ. ರಾಣಿಗೋವಿಂದರಾಜು ಅವರನ್ನು ಅಭಿನಂದಿಸಿದ ಅವರು 'ನಿಮ್ಮ ಸಾಹಿತ್ಯ ಸತತವಾಗಿ ನಡೆಯಲಿ' ಎಂದು ಹಾರೈಸಿದರು. ನಾನು ಈ ಸಮಾರಂಭದಲ್ಲಿ ಪಾಲ್ಗೊಳ್ಳಲು ಒಪ್ಪಿಗೆ ಸೂಚಿಸಿದ್ದಕ್ಕೆ ಕಾರಣ ಈ ಕವನ ಸಂಕಲನವನ್ನು ಪ್ರೊ. ಮಾಲಿಮದ್ದಣ್ಣ ಹಾಗೂ ಬಿ. ಆರ್. ರಾಮೇಗೌಡರಿಗೆ ಅರ್ಪಿಸಿರುವುದು ಒಂದೆಡೆಯಾದರೆ, ಮತ್ತೊಂದೆಡೆ ನನ್ನ ಆತ್ಮೀಯ ಸ್ನೇಹಿತರಾದ ರು. ಬಸಪ್ಪ ಹಾಗೂ ಎಸ್. ಆರ್. ಸಿದ್ಧರಾಜು (ಬೆಂ. ಮ. ಪಾಲಿಕೆಯ ಡಿ.ಸಿ.) ಈ ಸಮಾರಂಭಕ್ಕೆ ಆಹ್ವಾನಿಸಿದ್ದು ಮತ್ತೊಂದು ಕಾರಣ.

ಇದಾದನಂತರ ಪುಸ್ತಕದ ಕರ್ತೃ ವಿ. ರಾಣಿಗೋವಿಂದರಾಜು ತನ್ನ ಕವನ ಸಂಕಲನ ಎರಡನೆಯ ಕೃತಿಯಿದು ಎಂದು ತಿಳಿಸಿದರು. ಆ ನಂತರ ತನಗೆ ಸಾಹಿತ್ಯ ಅದರಲ್ಲೂ ವಿಶೇಷವಾಗಿ ವಚನ ಸಾಹಿತ್ಯದಲ್ಲಿ ಆಸಕ್ತಿ ಬೆಳೆಯಲು ರು. ಬಸಪ್ಪ



ಜೇಂಗೊಡ ಪುಸ್ತಕ ಬಿಡುಗಡೆ ಸಮಾರಂಭದಲ್ಲಿರುವವರು. ಬಸಪ್ಪ ಬಿ. ಆರ್. ರಾಮೇಗೌಡ, ಡಬ್ಲ್ಯು.ಪಿ. ಕೃಷ್ಣ ವಿ. ರಾಣಿಗೋವಿಂದರಾಜು, ಡಾ. ಎಂ.ಜಿ. ನಾಗರಾಜ್ ಮತ್ತು ಶ್ರ. ದೇ. ಪಾರ್ಶ್ವನಾಥ್ ಹಾಜರಿದ್ದರು.

ಹಾಗೂ ಜ.ಚ.ನಿ.ಯವರ ಸಾಹಿತ್ಯವೇ ಕಾರಣ ಎಂದು ತಿಳಿಸಿದರು. ಆ ನಂತರ ಸಭಿಕರ ಒತ್ತಾಯದ ಮೇರೆಗೆ ಜ.ಚ.ನಿ.ಯವರ ಬಗ್ಗೆ ಅವರು ಸಾಹಿತ್ಯಕ್ಕೆ ನೀಡಿದ ಕೊಡುಗೆ ಬಗ್ಗೆ ವಿ. ರಾಣಿಗೋವಿಂದರಾಜು ಅವರು ಸುಮಾರು 30 ನಿಮಿಷಗಳ ಕಾಲ ಮಾತನಾಡಿದರು.

ಕವಯಿತ್ರಿ ರಾಣಿಯವರ ಕೋರಿಕೆಯ ಮೇರೆಗೆ ಗಾಯಕರಾದ ನಾರಾಯಣ ರಾವ್ ಮಾನೆಯವರು 'ಜೇಂಗೊಡ' ಕವನ ಸಂಕಲನದ 'ಅನುಗಾಲಕೂ ನಾ ರಾಮಸುತೆ' ಎಂಬ ಕವನವನ್ನು ಸುಂದರವಾಗಿ ಹಾಡಿ ಶ್ರೋತೃಗಳ ಮನ ತಣಿಸಿದರು.

ಈ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಡಾ|| ಎಂ.ಜಿ. ನಾಗರಾಜ್ ಅವರು ತಮ್ಮ ಅಧ್ಯಕ್ಷ ಭಾಷಣ ಪ್ರಾರಂಭಿಸಿ ಜ.ಚ.ನಿ.ಯವರ ಸಾಹಿತ್ಯದ ವಿಶೇಷತೆಯ ಬಗ್ಗೆ ತಿಳಿಸಿದರು. ಆ ನಂತರ ಕವನ ಸಂಕಲನದ ಬಹುತೇಕ ಕವನಗಳ ಬಗ್ಗೆ ವಿಮರ್ಶೆ ಮಾಡಿ ಕವಯಿತ್ರಿಯ ಈ ಕವನ ಸಂಕಲನದಲ್ಲಿರುವ ಗುಣ-ದೋಷಗಳನ್ನು ಹಾಗೂ ಪ್ರಶಂಸಾರ್ಹವಾದ ವಿಷಯಗಳನ್ನು ತಿಳಿಸಿ, ಕವಯಿತ್ರಿ ತಮ್ಮನ್ನು ತಾವು ಹೇಗೆ ತಿದ್ದಿ ಬೆಳೆಸಿಕೊಳ್ಳಬೇಕೆಂಬ ಸಲಹೆಯನ್ನು ನೀಡಿದರು. ಸಭೆಗೆ ಮುನ್ನ ಕಾ. ಹೀ. ರಾಧಾಕೃಷ್ಣ ಅವರು ಸ್ವಾಗತ ಭಾಷಣ ಮಾಡಿದರೆ, ಬಿ. ಆರ್. ರಾಮೇಗೌಡರ ವಂದನಾರ್ಪಣೆಯೊಂದಿಗೆ ಮುಕ್ತಾಯವಾಯಿತು. ಸಮಾರಂಭದಲ್ಲಿ ಕವನಸಂಕಲನದ ಅರ್ಪಣೆ ಪಡೆದಿರುವ ಪ್ರೊ. ಮಾಲಿಮದ್ದಣ್ಣ ಶ್ರೀಮುನಿಮಾರಯ್ಯ, ಡಾ|| ಸುಶೀಲಮ್ಮ ಶ್ರೀ ತಿಮ್ಮರಾಯಶೆಟ್ಟಿ, ನಿವೃತ್ತ ಡೆಪ್ಯುಟಿ ಕಮೀಷನರ್ ಹೆಚ್. ಬಿ. ಎಸ್. ಆರಾಧ್ಯ, ಎಸ್. ಆರ್. ಸಿದ್ಧರಾಜು, ಶ್ರೀಯುತ ಕೆ. ರಾಮಯ್ಯ, ಕೆ.ಪಿ. ಅರಳಪ್ಪ, ನಿವೃತ್ತ ಪೊಲೀಸ್ ಇನ್‌ಸ್ಪೆಕ್ಟರ್ ಶಾಂತರಾಜು, ಶ್ರೀಮತಿ ಗಾಯಿತ್ರಿ ರಾಮಣ್ಣ ಆರ್. ಹಂಸ, ನಳಿನಿ ಮುಂತಾದವರು ಪಾಲ್ಗೊಂಡಿದ್ದರು.

# ಕನ್ನಡ ಸಾಹಿತ್ಯಕ್ಕೆ ಜ.ಚ.ನಿ ಕೊಡುಗೆ ಗಮನಾರ್ಹ

ಬೆಂಗಳೂರು: 4ನೇ ತರಗತಿ ಮಾತ್ರ ಓದಿದ್ದರೂ ಸತತ ಅಭ್ಯಾಸ, ಪರಿಶ್ರಮದಿಂದಾಗಿ ಜ.ಚ.ನಿ. ಖ್ಯಾತ ಸಾಹಿತಿಯಾದ್ದರು ಎಂದು ಹಿರಿಯ ವಿದ್ವಾಂಸ ಡಾ. ಎಂ.ಜಿ. ನಾಗರಾಜ್ ಅಭಿಪ್ರಾಯಪಟ್ಟರು.

ಕನ್ನಡ ಸಾಹಿತ್ಯ ಪರಿಷತ್ತಿನ ಪಂಪ ಸಭಾಂಗಣದಲ್ಲಿ ರಾಜ್ಯಪ್ರಗತಿ ಬಳಗ ಮತ್ತು ಚಂದನ ಪುಸ್ತಕ ಮಾಲೆಗಳ ಆಶ್ರಯದಲ್ಲಿ ನಡೆದ ವಿ. ರಾಣಿ ಗೋವಿಂದರಾಜು ಅವರ 'ಜೇಂಗೊಡ' ಕವನ ಸಂಕಲನ ಬಿಡುಗಡೆ ಹಾಗೂ ಡಾ. ಜ.ಚ.ನಿ. ಸ್ಮರಣೆ ಕಾರ್ಯಕ್ರಮದಲ್ಲಿ ಮಾತನಾಡಿದರು.



'ಜೇಂಗೊಡ' ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ರು. ಬಸಪ್ಪ, ಬಿ.ಆರ್. ರಾಮೇಗೌಡ, ಡಬ್ಲ್ಯು.ಪಿ. ಕೃಷ್ಣ, ವಿ. ರಾಣಿ ಗೋವಿಂದರಾಜು, ಡಾ. ಎಂ.ಜಿ. ನಾಗರಾಜ್ ಮತ್ತು ಶ್ರ.ದೇ. ಪಾರ್ಶ್ವನಾಥ ಹಾಜರಿದ್ದರು.

ಸಾಹಿತ್ಯ ಸಾಧನೆಗಾಗಿ ಅವರಿಗೆ ಡಾಕ್ಟರೇಟ್, ರಾಜ್ಯೋತ್ಸವ ಪ್ರಶಸ್ತಿ ಬಂದವು. ಅವರ ಸಮಗ್ರ ಸಾಹಿತ್ಯವನ್ನು ಇಂಗ್ಲಿಷ್‌ಗೆ ಅನುವಾದ ಮಾಡುವವರು ಸಿಕ್ಕದೆ ಹೋದ್ದರಿಂದ ಜ್ಞಾನಪೀಠ ಪ್ರಶಸ್ತಿ ಲಭಿಸಲಿಲ್ಲ ಎಂದರು.

ಕವನ ಸಂಕಲನದ ಅನೇಕ ಕವನಗಳನ್ನು ಉಲ್ಲೇಖಿಸಿ, ರಾಣಿ ಗೋವಿಂದರಾಜು ಕವನ ರಚನೆಯಲ್ಲಿ ಇನ್ನೂ ಎಚ್ಚರ ವಹಿಸಬೇಕಾಗಿದೆ. ಪ್ರಾಸ ಮೋಹ ಬಿಡಬೇಕಾಗಿದೆ. ಅನೇಕ ಸುಂದರ ಕವನಗಳನ್ನು ನೀಡಿರುವ ಅವರ ಪ್ರಯತ್ನ ಶ್ಲಾಘನೀಯ ಎಂದರು.

ಕಾರ್ಯಕ್ರಮ ಉದ್ಘಾಟಿಸಿದ ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಶ್ರ.ದೇ. ಪಾರ್ಶ್ವನಾಥ, ಕಾವಿಧಾರಿಗಳಾಗಿದ್ದರೂ, ಸಂಸಾರದ ಸಮಸ್ಯೆಗಳೂ ಸೇರಿದಂತೆ ಸಮಾಜದ ಎಲ್ಲ ವಿಷಯಗಳ ಬಗೆಗೆ ವಚನಗಳನ್ನು ಬರೆದು ಕನ್ನಡ ಬೆಳೆಸುವ ಕೆಲಸ ಮಾಡಿದ ಜ.ಚ.ನಿ. ಪ್ರಾತಃಸ್ಮರಣೀಯರು. ಅಲ್ಲದೆ ಪ್ರಕೃತಿಯ ಬಗೆಗೆ ಅನೇಕ ಉತ್ತಮ ಕವನಗಳನ್ನು 'ಜೇಂಗೊಡ' ಸಂಕಲನದಲ್ಲಿ ದಾಖಲಿಸಿರುವ ರಾಣಿ ಗೋವಿಂದರಾಜು ಇನ್ನೂ ಎತ್ತರಕ್ಕೆ ಬೆಳೆಯಲಿ ಎಂದು ಹಾರೈಸಿದರು.

ಕವನ ಸಂಕಲ ಬಿಡುಗಡೆ ಮಾಡಿದ ಶಿಕ್ಷಣ ತಜ್ಞ ಡಬ್ಲ್ಯು.ಪಿ. ಕೃಷ್ಣ, ಸಮಾಜಮುಖಿಯಾದ ಅನೇಕ ಕವನಗಳು ಸಂಕಲನದಲ್ಲಿವೆ. ರಾಣಿ ಗೋವಿಂದರಾಜು ಅಂತರ್ಮುಖಿ ಆಗಬೇಕು. ಅಧ್ಯಾತ್ಮ ಮುಖಿಯೂ ಆಗಬೇಕು. ಆಗ ಇನ್ನೂ ಶ್ರೇಷ್ಠ ಕವಯಿತ್ರಿಯಾಗುತ್ತಾರೆ ಎಂದು ಹೇಳಿದರು.

ಕವಯಿತ್ರಿ ರಾಣಿ ಗೋವಿಂದರಾಜು ಅವರು ಕನ್ನಡಕ್ಕೆ ಅನೇಕ ಶಬ್ದಗಳನ್ನು ನೀಡಿದ ಡಾ. ಜ.ಚ.ನಿ. ಅವರ ಬದುಕು-ಬರಹದ ಬಗೆಗೆ ಉಪನ್ಯಾಸ ನೀಡಿದರು. ರು. ಬಸಪ್ಪ ಕಾರ್ಯಕ್ರಮ ನಿರೂಪಿಸಿದರು. ನಾರಾಯಣ ರಾವ್ ಮಾನೆ ನಾಡಗೀತೆ ಹಾಡಿದರು. ಕಾ.ಹೀ. ರಾಧಾಕೃಷ್ಣ ಸ್ವಾಗತಿಸಿದರು. ಬಿ.ಆರ್. ರಾಮೇಗೌಡ ವಂದಿಸಿದರು.

ಕನ್ನಡಪ್ರಭ, ಶನಿವಾರ, 9 ಡಿಸೆಂಬರ್ 2006



**ಪುಸ್ತಕ ಬಿಡುಗಡೆ**

*ನಗರದ ಚಂದನ ಪುಸ್ತಕ ಮಾಲೆ ಇತ್ತೀಚೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಹಮ್ಮಿಕೊಂಡಿದ್ದ ಡಾ|ಜ.ಚ.ನಿ ಸ್ಮರಣಾ ಕಾರ್ಯಕ್ರಮದಲ್ಲಿ ರಾಣಿ ಗೋವಿಂದರಾಜು ಅವರ ಜೇಂಗೊಡ ಎಂಬ ಪುಸ್ತಕವನ್ನು ಬಿಡುಗಡೆಗೊಳಿಸಲಾಯಿತು.*

ಬೆಂಗಳೂರು ವಿಜಯ, ಗುರುವಾರ, 30 ನವೆಂಬರ್ 2006



ಶೇಷಾದ್ರಿಪುರ ಸಂಜೆ ಪದವಿಪೂರ್ವ ಕಾಲೇಜಿನಲ್ಲಿ ನಡೆದ ರಾಜ್ಯೋತ್ಸವದಲ್ಲಿ ಪ್ರಾಂಶುಪಾಲ ಪ್ರೊ. ಎನ್. ಬೈರೇಗೌಡ, ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ವಚನ ಸಾಹಿತಿ ಅನ್ನದಾನಯ್ಯ ಪುರಾಣಿಕ, ಅಧ್ಯಕ್ಷ ನಂಜಪ್ಪ, ನಾರಾಯಣ ಮತ್ತು ಆಡಳಿತ ಸಲಹಾ ಪರಿಷತ್ ಅಧ್ಯಕ್ಷ ವೀರಭದ್ರಯ್ಯ ಪಾಲ್ಗೊಂಡರು.

ರಾಜ್ಯಪ್ರಗತಿ 25-10-2006

# ರೆಡ್‌ಕ್ರಾಸ್ ರಾಷ್ಟ್ರೀಯ ಮಂಡಳಿ ಸದಸ್ಯರಾಗಿ ವೂಡೆ ಪಿ.ಕೃಷ್ಣ

ದೆಹಲಿಯಲ್ಲಿ ಇತ್ತೀಚೆಗೆ ನಡೆದ ರೆಡ್‌ಕ್ರಾಸ್ ರಾಷ್ಟ್ರೀಯ ಮಂಡಳಿಯ ಚುನಾವಣೆಯಲ್ಲಿ ಕರ್ನಾಟಕದ ವೂಡೆ ಪಿ.ಕೃಷ್ಣ ಅವರು ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ೨೦೦೬-೨೦೦೮ರ ಅವಧಿಗೆ ರೆಡ್‌ಕ್ರಾಸ್ ರಾಷ್ಟ್ರೀಯ



ಮಂಡಳಿಯಲ್ಲಿ ಕರ್ನಾಟಕವನ್ನು ಪ್ರತಿನಿಧಿಸಲಿರುವ ಜನಪರ ಕಾಳಜಿಯ ಈ ಹಿರಿಯ ಸಮಾಜ ಸೇವಕ ಕಳೆದ ೨೦ ವರ್ಷಗಳಿಂದ ರೆಡ್‌ಕ್ರಾಸ್ ಕಾರ್ಯಕರ್ತರಾಗಿ ಮಾನವೀಯ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ರೆಡ್‌ಕ್ರಾಸ್‌ನ ಕರ್ನಾಟಕ ರಾಜ್ಯಶಾಖೆಯ ಗೌ|| ಕೋಶಾಧ್ಯಕ್ಷರಾಗಿಯೂ ಕಾರ್ಯನಿರ್ವಹಿಸುತ್ತಿರುವ ಡಬ್ಲ್ಯು.ಪಿ.ಕೃಷ್ಣ ಅವರು ಹಲವು ಶಾಲೆ, ಕಾಲೇಜುಗಳನ್ನು ನಡೆಸುತ್ತಿರುವ ಶೇಷಾದ್ರಿಪುರ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿಯಾಗಿದ್ದಾರೆ. ಈ ಸಂಸ್ಥೆಯ ಶಾಲೆ, ಕಾಲೇಜುಗಳು ಇಂದು ಗಳಿಸಿರುವ ಖ್ಯಾತಿಯಲ್ಲಿ ಕೃಷ್ಣ ಅವರ ಕೊಡುಗೆ ಅತ್ಯಂತ ಗಮನಾರ್ಹ.

ರಾಜ್ಯ ಸರ್ಕಾರದಿಂದ ರಾಜ್ಯೋತ್ಸವ ಪ್ರಶಸ್ತಿ, ಬೆಂಗಳೂರು ಮಹಾನಗರ ಪಾಲಿಕೆಯಿಂದ ಕೆಂಪೇಗೌಡ ಪ್ರಶಸ್ತಿ ಸೇರಿದಂತೆ ಅನೇಕ ಪ್ರಶಸ್ತಿಗಳನ್ನು ಪಡೆದು, ನಾನಾ ಸಂಘ ಸಂಸ್ಥೆಗಳಿಂದ ಸನ್ಮಾನಿತರಾಗಿರುವ ಡಬ್ಲ್ಯು.ಪಿ.ಕೃಷ್ಣ ಅವರು ಅನೇಕ ಸಂಘ ಸಂಸ್ಥೆಗಳ ವಿವಿಧ ಹುದ್ದೆಗಳನ್ನಲಂಕರಿಸಿ, ನಿಷ್ಠಾಪೂರ್ಣ ಸೇವೆ ಸಲ್ಲಿಸುತ್ತಿದ್ದಾರೆ.

''ಪತ್ರಿಕೆ''ಯ ಅಭಿಮಾನಿ ಓದುಗರೂ ಆಗಿರುವ ಅವರಿಗೆ ರೆಡ್‌ಕ್ರಾಸ್ ರಾಷ್ಟ್ರೀಯ ಮಂಡಲಿ ಸದಸ್ಯರಾಗಿ ಆಯ್ಕೆಯಾದುದಕ್ಕಾಗಿ ''ಪತ್ರಿಕೆ'' ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತಿದೆ.



ಈ ಸಂಜೆ
ಮಂಗಳವಾರ, 10 ಅಕ್ಟೋಬರ್ 2006

# ರೆಡ್‌ಕ್ರಾಸ್ ಸಂಸ್ಥೆಗೆ ಆಯ್ಕೆ



ಬೆಂಗಳೂರು, ಅ. 10– ವೂಡೇ ಪಿ.ಕೃಷ್ಣ ಅವರು ದೆಹಲಿಯಲ್ಲಿ ನಡೆದ ಚುನಾವಣೆಯಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಆಡಳಿತ ಮಂಡಳಿ ಸದಸ್ಯರಾಗಿ 2006–08 ಅವಧಿಗೆ ಆಯ್ಕೆಯಾಗಿದ್ದಾರೆ.

ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಕೃಷ್ಣ ಅವರು 20 ವರ್ಷಗಳಿಂದ ರೆಡ್‌ಕ್ರಾಸ್‌ನ ಸಕ್ರಿಯ ಕಾರ್ಯಕರ್ತರಾಗಿ ಸಂಸ್ಥೆಯ ರಾಜ್ಯ ಶಾಖೆಯ ಗೌರವ ಕೋಶಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

ಉದಯವಾಣಿ
ಶುಕ್ರವಾರ ಅಕ್ಟೋಬರ್ 6, 2006

## ರೆಡ್‌ಕ್ರಾಸ್‌ಗೆ ಆಯ್ಕೆ



ಬೆಂಗಳೂರು, ಅ. 5: ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಆಡಳಿತ ಮಂಡಳಿ ಸದಸ್ಯರಾಗಿ 2006-08ರ ಅವಧಿಗೆ ಪ್ರೊಡೇ. ಪಿ. ಕೃಷ್ಣ ಅವರು ಆಯ್ಕೆಯಾಗಿದ್ದಾರೆ.

ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಕೃಷ್ಣ ಅವರು ಕಳೆದ 20 ವರ್ಷಗಳಿಂದ ರೆಡ್‌ಕ್ರಾಸ್‌ನ ಸಕ್ರಿಯ ಕಾರ್ಯಕರ್ತರಾಗಿ ಸಂಸ್ಥೆಯ ರಾಜ್ಯ ಶಾಖೆಯ ಗೌರವ ಕೋಶಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

ಉದಯವಾಣಿ
3-10-2006

## ಆಯ್ಕೆ

ವೂಡೇ ಪಿ. ಕೃಷ್ಣ ಅವರು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಆಡಳಿತ ಮಂಡಳಿ ಸದಸ್ಯರಾಗಿ 2006-08ನೇ ಅವಧಿಗೆ ಆಯ್ಕೆಯಾಗಿದ್ದಾರೆ. ದೆಹಲಿಯಲ್ಲಿ ಕಳೆದ ಮೂರು ದಿನಗಳ ಹಿಂದೆ ನಡೆದ ಚುನಾವಣೆಯಲ್ಲಿ ಕೃಷ್ಣ ಅವರು ಈ ಸ್ಥಾನಕ್ಕೆ ಆಯ್ಕೆಯಾದರು. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ಅವರು ಕಳೆದ 20 ವರ್ಷಗಳಿಂದಲೂ ರೆಡ್‌ಕ್ರಾಸ್‌ನ ಸಕ್ರಿಯ ಕಾರ್ಯಕರ್ತರಾಗಿ, ಸಂಸ್ಥೆಯ ರಾಜ್ಯ ಶಾಖೆಯ ಗೌರವ ಕೋಶಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

4 ಕನ್ನಡಪ್ರಭ, ಬೆಂಗಳೂರು
ಮಂಗಳವಾರ, 3 ಅಕ್ಟೋಬರ್ 2006

**ರಾಜ್ಯ ವಾರ್ತೆ**

# ರೆಡ್‌ಕ್ರಾಸ್‌ಗೆ ಕೃಷ್ಣ ಆಯ್ಕೆ



ಪ್ರೊ.ಡೇ.ಪಿ.ಕೃಷ್ಣ ದೆಹಲಿಯಲ್ಲಿ ನಡೆದ ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಆಡಳಿತ ಮಂಡಳಿ ಸದಸ್ಯರಾಗಿ 2006–08ರ ಅವಧಿಗೆ ಆಯ್ಕೆಯಾಗಿದ್ದಾರೆ. ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ಇವರು ಕಳೆದ 20 ವರ್ಷಗಳಿಂದ ರೆಡ್‌ಕ್ರಾಸ್‌ನ ಕಾರ್ಯಕರ್ತರಾಗಿ, ರೆಡ್‌ಕ್ರಾಸ್ ರಾಜ್ಯ ಶಾಖೆಯ ಗೌರವ ಕೋಶಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು.

ಸಂಜೆವಾಣಿ
ಸೋಮವಾರ 2 ಅಕ್ಟೋಬರ್ 2006



ಪೂಡೇ ಪಿ. ಕೃಷ್ಣ ಅವರು ದೆಹಲಿಯಲ್ಲಿ 29ನೇ ಸೆಪ್ಟೆಂಬರ್ 2006ರಂದು ನಡೆದ ಚುನಾವಣೆಯಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಆಡಳಿತ ಮಂಡಳಿ ಸದಸ್ಯರಾಗಿ 2006-08 ಅವಧಿಗೆ ಆಯ್ಕೆಯಾಗಿದ್ದಾರೆ. ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಕೃಷ್ಣ ಅವರು 20 ವರ್ಷಗಳಿಂದ ರೆಡ್‌ಕ್ರಾಸ್‌ನ ಸಕ್ರಿಯ ಕಾರ್ಯಕರ್ತರಾಗಿ ಸಂಸ್ಥೆಯ ರಾಜ್ಯ ಶಾಖೆಯ ಗೌರವ ಕೋಶಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

ಉದಯವಾಣಿ
ಭಾನುವಾರ 1 ಅಕ್ಟೋಬರ್ 2006

# ರಕ್ತದಾನ ಶಿಬಿರ ಸಂಘಟಿಸುವ ಸಂಸ್ಥೆಗಳಿಗೆ ಪ್ರಶಸ್ತಿ

ಬೆಂಗಳೂರು, ಸೆ. 30: ರಕ್ತದಾನ ಮಾಡುವಂತೆ ಪ್ರೇರೇಪಿಸುವ ಹಾಗೂ ನಿಯಮಿತವಾಗಿ 'ರಕ್ತದಾನ ಶಿಬಿರಗಳನ್ನು ನಡೆಸುವ ಸ್ವಯಂ ಸೇವಾ ಸಂಸ್ಥೆಗಳಿಗೆ ಪ್ರಶಸ್ತಿ ನೀಡಿ ಪ್ರೋತ್ಸಾಹಿಸಲು ಸರ್ಕಾರ ಉದ್ದೇಶಿಸಿದೆ ಎಂದು ಆರೋಗ್ಯ ಸಚಿವ ಆರ್. ಅಶೋಕ್ ತಿಳಿಸಿದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ನಗರದ ರೆಡ್‌ಕ್ರಾಸ್ ಭವನದಲ್ಲಿ ಹಮ್ಮಿಕೊಳ್ಳಲಾಗಿದ್ದ ರಾಷ್ಟ್ರೀಯ ಸ್ವಯಂಪ್ರೇರಿತ ರಕ್ತದಾನ ದಿನಾಚರಣೆ ಕಾರ್ಯಕ್ರಮವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ರಾಜ್ಯದಲ್ಲಿ ರಕ್ತಕ್ಕೆ ಹೆಚ್ಚಿನ ಬೇಡಿಕೆಯಿದ್ದು ಅಗತ್ಯವಿರುವ ರಕ್ತದ ಪ್ರಮಾಣದಲ್ಲಿ ಶೇ 50 ರಷ್ಟನ್ನೂ ಪೂರೈಸಲಾಗುತ್ತಿಲ್ಲ. ಜನರಲ್ಲಿ ರಕ್ತದಾನದ ಮಹತ್ವದ ಬಗ್ಗೆ ಅರಿವಿಲ್ಲದೇ ಇರುವುದು ಹಾಗೂ ರಕ್ತದಾನದ ಬಗ್ಗೆ ಇರುವ ಭಯ ಇದಕ್ಕೆ ಕಾರಣವಾಗಿದ್ದು ರೆಡ್‌ಕ್ರಾಸ್ ನಂತಹ ಸಂಸ್ಥೆಗಳು ರಕ್ತದಾನ ಕುರಿತಂತೆ ಜನರಲ್ಲಿ ಜಾಗೃತಿ ಮೂಡಿಸಬೇಕು ಎಂದರು.

ರಾಜ್ಯದಲ್ಲಿ ಮಾತ್ರವಲ್ಲದೆ ಇಡೀ ದೇಶದಲ್ಲಿ ರಕ್ತದ ಕೊರತೆಯಿಂದ ಮರಣ ಹೊಂದುವವರ ಸಂಖ್ಯೆ ದಿನೇದಿನೆ ಹೆಚ್ಚುತ್ತಿದೆ. ಅಪಘಾತಗಳಾದ ಸಂದರ್ಭದಲ್ಲಿ ಗಾಯಗೊಂಡ ವ್ಯಕ್ತಿಯ ದೇಹದಿಂದ ರಕ್ತ ಹರಿದು ಹೋಗುತ್ತಿರುತ್ತದೆ. ಸುತ್ತಲೂ ನಿಂತಿರುವ ಜನ ಅದನ್ನು ನೋಡಿ ಮರುಕದ



ರೆಡ್‌ಕ್ರಾಸ್ ವತಿಯಿಂದ ಶನಿವಾರ ಏರ್ಪಡಿಸಿದ್ದ ರಾಷ್ಟ್ರೀಯ ಸ್ವಯಂ ರಕ್ತದಾನ ದಿನ ಕಾರ್ಯಕ್ರಮದಲ್ಲಿ ಆರೋಗ್ಯ ಸಚಿವ ಆರ್. ಅಶೋಕ್ ಪ್ರಮಾಣ ಪತ್ರ ವಿತರಿಸಿದರು.

ಮಾತುಗಳನ್ನಾಡಿ ಹೋದರೆ ಸಾಲದು ಆ ವ್ಯಕ್ತಿಯನ್ನು ಆಸ್ಪತ್ರೆಗೆ ಸೇರಿಸಿ, ಅಗತ್ಯವಿದ್ದರೆ ರಕ್ತದಾನ ಮಾಡುವ ಮೂಲಕ ಅಮೂಲ್ಯ ಜೀವವನ್ನು ರಕ್ಷಿಸುವಂತೆ ಅವರು ಕರೆ ನೀಡಿದರು.

ಸಂಸ್ಥೆಯ ರಕ್ತದಾನ ಉಪಸಮಿತಿಯ ಅಧ್ಯಕ್ಷ ರಾಜುಚಂದ್ರಶೇಖರ್ ಮಾತನಾಡಿ ವಿಶ್ವದಾದ್ಯಂತ ಪ್ರತಿ ವರ್ಷ ಸುಮಾರು 5 ಲಕ್ಷ ಮಹಿಳೆಯರು ಹೆರಿಗೆ ಸಮಯದಲ್ಲಿ ರಕ್ತದ ಕೊರತೆಯಿಂದ ಸಾವನ್ನಪ್ಪುತ್ತಾರೆ. ಭಾರತದಲ್ಲಿ ರಕ್ತದ ಕೊರತೆಯಿಂದ ಮರಣ ಹೊಂದುವವರ ಸಂಖ್ಯೆ ದಿನೇದಿನೆ ಹೆಚ್ಚುತ್ತಿದ್ದು, ರಕ್ತದ ಕೊರತೆಯನ್ನು ನಿವಾರಿಸಲು ಹೆಚ್ಚಿನ ಸಂಖ್ಯೆಯ ಯುವಕರು ರಕ್ತದಾನ ಮಾಡಲು ಮುಂದೆ ಬರುವಂತೆ ಕರೆ ನೀಡಿದರು.

ರಾಜ್ಯ ಘಟಕದಿಂದ ಸಂಸ್ಥೆಯ ರಾಷ್ಟ್ರೀಯ ಪದಾಧಿಕಾರಿಯಾಗಿ ಆಯ್ಕೆಯಾದ ಡಬ್ಲ್ಯು.ಪಿ. ಕೃಷ್ಣ ಅವರನ್ನು ಕಾರ್ಯಕ್ರಮದಲ್ಲಿ ಸನ್ಮಾನಿಸಲಾಯಿತು. ಸಂಸ್ಥೆಯ ರಾಜ್ಯ ಘಟಕದ ಉಪಾಧ್ಯಕ್ಷ ಚಂದ್ರಶೇಖರ ಶೆಟ್ಟಿ, ಕಾರ್ಯದರ್ಶಿ ಎನ್.ಜಿ. ನಾರಾಯಣ್, ಸಂಸ್ಥೆಯ ಖಜಾಂಚಿ ಸರೋಜ ಕೆ. ಎಂ. ನಂಜಪ್ಪ ಉಪಸ್ಥಿತರಿದ್ದರು.

# ರಾಜ್ಯದಲ್ಲಿ ಶೇ. 40ರಷ್ಟು ರಕ್ತದ ಕೊರತೆ

ಬೆಂಗಳೂರು, ಸೆ. 30-ರಾಜ್ಯದಲ್ಲಿ ಈಗ ಶೇ.40ರಷ್ಟು ರಕ್ತದ ಕೊರತೆ ಕಂಡುಬರುತ್ತಿದೆ ಎಂದು ಆರೋಗ್ಯ ಸಚಿವ ಆರ್. ಅಶೋಕ್ ಹೇಳಿದರು.

ರಾಷ್ಟ್ರೀಯ ಸ್ವಯಂ ಪ್ರೇರಿತ ರಕ್ತದಾನ ದಿನಾಚರಣೆ ಪ್ರಯುಕ್ತ ಭಾರತೀಯ ರೆಡ್ ಕ್ರಾಸ್ ಸೊಸೈಟಿಯ ಬೆಂಗಳೂರು ಶಾಖೆಯಲ್ಲಿ ಶನಿವಾರ ಆಯೋಜಿಸಿದ್ದ ರಕ್ತದಾನ ಶಿಬಿರಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು.

ರಾಜ್ಯದಲ್ಲಿ ರಕ್ತದ ಕೊರತೆಯನ್ನು ನೀಗಿಸಲು ಸ್ವಯಂ ಸೇವಾ ಸಂಸ್ಥೆಗಳು ಮುಂದೆ ಬರಬೇಕು. ಹೆಚ್ಚು ಸ್ವಯಂ ಪ್ರೇರಿತ ರಕ್ತದಾನ ಶಿಬಿರಗಳನ್ನು ಆಯೋಜಿಸುವ ಸಂಸ್ಥೆಗಳಿಗೆ ಪ್ರಶಸ್ತಿ ನೀಡಲು ಸರಕಾರ ನಿರ್ಧರಿಸಿದೆ. ಪ್ರತಿವರ್ಷ ಅ.1ನ್ನು ಸ್ವಯಂ ಪ್ರೇರಿತ ರಕ್ತದಾನ ದಿನವನ್ನಾಗಿ ರಾಜ್ಯದಲ್ಲಿ ಆಚರಿಸಲಾಗುತ್ತದೆ ಎಂದರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಕರ್ನಾಟಕ ವಿಭಾಗದ ಉಪಾಧ್ಯಕ್ಷ ಡಾ. ಎಸ್. ಚಂದ್ರಶೇಖರ ಶೆಟ್ಟಿ, ರಕ್ತ ಸಂಗ್ರಹ ಮಾಡುವುದು ಲಾಭದ ಉದ್ಯಮವಾಗಿ ಬೆಳೆಯುತ್ತಿದೆ ಎಂದರು.

ರಕ್ತದಾನ ಮಾಡುವವರು ಮತ್ತು ಅದನ್ನು ಸಂಗ್ರಹಿಸುವವರು ಕೆಲವೊಂದು ನೀತಿ-ನಿಯಮ ಅನುಸರಿಸಬೇಕಾಗುತ್ತದೆ. ಇಲ್ಲದಿದ್ದರೆ ಮಾನವೀಯತೆಯಿಂದ ರಕ್ತದಾನ ಮಾಡಿದರೂ ಅದರ ಸದ್ಬಳಕೆ ಆಗುವುದಿಲ್ಲ. ದೇಶದಲ್ಲಿ ಶೇ.59ರಷ್ಟು ಮಂದಿಗೆ ರಕ್ತದಾನ ಮತ್ತು ರಕ್ತ ಪಡೆಯುವುದರಿಂದಲೇ ಏಡ್ಸ್ ಬರುತ್ತಿದೆ ಎಂದು ಹೇಳಿದರು.



ರಾಷ್ಟ್ರೀಯ ಸ್ವಯಂ ಪ್ರೇರಿತ ರಕ್ತದಾನ ದಿನಾಚರಣೆಗೆ ಸಚಿವ ಆರ್. ಅಶೋಕ್ ನಗರದಲ್ಲಿ ಶನಿವಾರ ಚಾಲನೆ ನೀಡಿದರು. ಡಾ. ಎಸ್. ಚಂದ್ರಶೇಖರ ಶೆಟ್ಟಿ, ರಾಜು ಚಂದ್ರಶೇಖರ್ ಹಾಜರಿದ್ದರು.

ರೆಡ್ ಕ್ರಾಸ್ ಸೊಸೈಟಿ ರಕ್ತದಾನ ಉಪ ಸಮಿತಿ ಅಧ್ಯಕ್ಷ ರಾಜು ಚಂದ್ರಶೇಖರ್ ಮಾತನಾಡಿ, ನಾನಾ ರೀತಿಯ ಗೊಂದಲ-ಭಯದಿಂದಾಗಿ ಜನರು ರಕ್ತದಾನ ಮಾಡಲು ಮುಂದೆ ಬರುತ್ತಿಲ್ಲ. ರಾಜ್ಯದಲ್ಲಿ ಸಾವಿರಕ್ಕೆ 5 ಮಂದಿ ಮಾತ್ರ ರಕ್ತದಾನ ಮಾಡುತ್ತಿದ್ದಾರೆ. ಆರೋಗ್ಯವಂತ ವ್ಯಕ್ತಿಯು ವರ್ಷಕ್ಕೆ ಮೂರು ಬಾರಿ ರಕ್ತ ನೀಡಬಹುದು ಎಂದು ತಿಳಿಸಿದರು.

ಭಾರತೀಯ ರೆಡ್ ಕ್ರಾಸ್ ಸೊಸೈಟಿ ಸಮಿತಿಗೆ ಸದಸ್ಯರಾಗಿ ಆಯ್ಕೆಗೊಂಡಿರುವ ಡಬ್ಲ್ಯು.ಪಿ. ಕೃಷ್ಣ ಅವರನ್ನು ಇದೇ ಸಂದರ್ಭದಲ್ಲಿ ಅಭಿನಂದಿಸಲಾಯಿತು. ಸೊಸೈಟಿಯ ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ, ಖಜಾಂಚಿ ಸರೋಜಾ ಕೆ.ಎಂ. ನಂಜಪ್ಪ ಉಪಸ್ಥಿತರಿದ್ದರು.

## ರೆಡ್‌ಕ್ರಾಸ್‌ಗೆ ಆಯ್ಕೆ



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಆಡಳಿತ ಮಂಡಳಿ ಸದಸ್ಯ ಸ್ಥಾನಕ್ಕೆ ಡಬ್ಲ್ಯು.ಪಿ. ಕೃಷ್ಣ ಆಯ್ಕೆಯಾಗಿದ್ದಾರೆ.

ರೆಡ್‌ಕ್ರಾಸ್ ಸಂಸ್ಥೆಯ ಕಾರ್ಯದರ್ಶಿಯಾಗಿ ಹಲವು ವರ್ಷಗಳಿಂದ ಸೇವೆ ಸಲ್ಲಿಸುತ್ತಿರುವ ಅವರು, ಪ್ರಸ್ತುತ ಆಡಳಿತ ಮಂಡಳಿ ಸದಸ್ಯರಾಗಿ 2006-08ರವರೆಗೆ ಕಾರ್ಯನಿರ್ವಹಿಸಲಿದ್ದಾರೆ.

1-10-2006

# ದಿನದ ಕಾರ್ಯಕ್ರಮ

ಶೇಷಾದ್ರಿಪುರ ಬಾಲಕರ ಪ್ರೌಢಶಾಲೆ: ಶೇಷಾದ್ರಿಪುರ. ಗಾಂಧಿ ಜಯಂತಿ. ಅಧ್ಯಕ್ಷತೆ: ಸಂಸ್ಥೆ ಅಧ್ಯಕ್ಷ ಕೆ.ಎಂ. ನಂಜಪ್ಪ. ಅತಿಥಿ: ಸ್ವಾತಂತ್ರ್ಯ ಹೋರಾಟಗಾರ ಎನ್. ಕೃಷ್ಣಸ್ವಾಮಿ, ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ. ಬೆಳಿಗ್ಗೆ 10.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ: ಗಾಂಧೀ ಭವನ, ಕುಮಾರಕೃಪಾ ರಸ್ತೆ. ಗಾಂಧಿ ಜಯಂತಿ ಹಾಗೂ ಡಾ। ಟಿ.ಸಿ. ಪೂರ್ಣಿಮಾ ಅವರು ಕನ್ನಡಕ್ಕೆ ಅನುವಾದಿಸಿದ ಸುಮಿತ್ರಾ ಗಾಂಧೀ ಕುಲಕರ್ಣಿ ಅವರ 'ಮಧುರ ಸ್ಮೃತಿ ಗಾಂಧಿ' ಕೃತಿಗೆ ಜಯಶ್ರೀ ಟ್ರಸ್ಟ್ ದತ್ತಿ ಪುರಸ್ಕಾರ. ಅತಿಥಿ: ಕೇಂದ್ರ ಯೋಜನಾ ರಾಜ್ಯ ಸಚಿವ ಎಂ.ವಿ. ರಾಜಶೇಖರನ್, ಕೈಗಾರಿಕಾ ಸಚಿವ ಕಟ್ಟಾ ಸುಬ್ರಹ್ಮಣ್ಯ ನಾಯ್ಡು, ವಿಧಾನ ಪರಿಷತ್ ಸದಸ್ಯ ಕೆ.ಬಿ. ಮುನಿವೆಂಕಟ ರೆಡ್ಡಿ. ಅಧ್ಯಕ್ಷತೆ: ಸಂಸ್ಥೆ ಅಧ್ಯಕ್ಷ ಡಾ। ಹೋ. ಶ್ರೀನಿವಾಸಯ್ಯ. ಬೆಳಿಗ್ಗೆ 9.30.

ಉದಯವಾಣಿ
ಮಂಗಳವಾರ ಸೆಪ್ಟೆಂಬರ್ 12, 2006

# ವಂದೇಮಾತರಂ ಶತಮಾನೋತ್ಸವ



ಶೇಷಾದ್ರಿಪುರ

ಶೇಷಾದ್ರಿಪುರ ಬಾಲಕರ ಪ್ರೌಢಶಾಲೆಯಲ್ಲಿ ಇತ್ತೀಚೆಗೆ 'ವಂದೇಮಾತರಂ' ಗೀತೆಯ ಶತಮಾನೋತ್ಸವ ಸಮಾರಂಭ ನಡೆಯಿತು.

ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಸತ್ಯವ್ರತ ಅವರು ಮುಖ್ಯ ಅತಿಥಿಯಾಗಿ ಭಾಗವಹಿಸಿ, ವಿದ್ಯಾರ್ಥಿಗಳಿಗೆ 'ವಂದೇ ಮಾತರಂ' ಗೀತೆಯ ಐತಿಹಾಸಿಕ ಹಿನ್ನೆಲೆ ಹಾಗೂ ರಾಷ್ಟ್ರೀಯ ಮಹತ್ವವನ್ನು ಸವಿವರವಾಗಿ ತಿಳಿಹೇಳಿದರು.

ಶೇಷಾದ್ರಿಪುರ ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಗೌರವ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ, ಶಾಲೆಯ ಮುಖ್ಯೋಪಾಧ್ಯಾಯರಾದ ಶಿವಕುಮಾರ ಆರಾಧ್ಯ ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಬೆಂಗಳೂರು ವಿಜಯ
ಶುಕ್ರವಾರ 08 ಸೆಪ್ಟೆಂಬರ್ 2006 III

# ನಾಡಿನ ಅಭಿವೃದ್ಧಿಗೆ ಗುಣಮಟ್ಟದ ಶಿಕ್ಷಣ ಪೂರಕ

ಬೆಂಗಳೂರು: ಗುಣಮಟ್ಟದ ಶಿಕ್ಷಣ ನೀಡಿಕೆಯಿಂದ ಮಾತ್ರ ವಿದ್ಯಾರ್ಥಿಗಳಲ್ಲಿ ಈ ದೇಶ-ಭಾಷೆ-ಸಂಸ್ಕೃತಿ-ನಾಡಿನ ಬಗ್ಗೆ ಗೌರವ ಮೂಡುತ್ತದೆ ಎಂದು ಶೇಷಾದ್ರಿಪುರ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ಹಾಗೂ ಶಿಕ್ಷಣ ತಜ್ಞ ವೂಡೆ ಪಿ. ಕೃಷ್ಣ ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಪದವಿಪೂರ್ವ ಕಾಲೇಜಿನಲ್ಲಿ ಪ್ರಥಮ ಪಿಯುಸಿ ತರಗತಿಗಳ ಪ್ರಾರಂಭೋತ್ಸವದ ಸಮಾರಂಭ ಉದ್ಘಾಟಿಸಿ, ಸಮಾಜದಲ್ಲಿ ಉನ್ನತ ಮೌಲ್ಯಗಳನ್ನು ಅಳವಡಿಸಿಕೊಳ್ಳಲು ಮಕ್ಕಳಿಗೆ ಇದು ಅವಶ್ಯಕ. ಈ ಮೂಲಕ ದೇಶವೂ ಶ್ರೇಷ್ಠವಾಗುತ್ತದೆ ಎಂದರು.

ಶಿಕ್ಷಣದಲ್ಲಿ ಯಾವುದೇ ಮರ್ಜಿ, ರಾಜಕೀಯ ಸಲ್ಲ, ನಾವು ಯಾವುದೇ ರೀತಿಯಲ್ಲಿ ರಾಜಿ ಮಾಡಿಕೊಳ್ಳುವುದಿಲ್ಲ. ವಿದ್ಯಾರ್ಥಿಗಳು ಶ್ರದ್ಧೆ, ಭಕ್ತಿಯಿಂದ ವಿದ್ಯೆಯೆಂಬ ತಪಸ್ಸು ಮಾಡಿ ಕಾಲೇಜಿಗೆ ಹಾಗೂ ಸಮಾಜಕ್ಕೆ ಕೀರ್ತಿ ತರಬೇಕೆಂದು ಹಾರೈಸಿದರು.



ಶೇಷಾದ್ರಿಪುರ ಪದವಿಪೂರ್ವ ಕಾಲೇಜಿನಲ್ಲಿ ಪ್ರಥಮ ಪಿಯುಸಿ ತರಗತಿಗಳ ಪ್ರಾರಂಭೋತ್ಸವದ ಸಮಾರಂಭದಲ್ಲಿ ವೂಡೆ ಪಿ. ಕೃಷ್ಣ ಆರ್. ಕೃಷ್ಣ ಪ್ರೊ. ಎಂ.ಆರ್. ಶ್ರೀನಿವಾಸ್, ಮ್ಯಾಥ್ಯೂ ಪಿ. ಥಾಮಸ್, ಜೀವಿತಾ ಪಾಲ್ಗೊಂಡಿದ್ದರು.

ಇದೇ ಸಂದರ್ಭದಲ್ಲಿ ದ್ವಿತೀಯ ಪಿಯುಸಿ ವಿದ್ಯಾರ್ಥಿಗಳಿಂದ ಸಾಂಸ್ಕೃತಿಕ ಮನರಂಜನಾ ಕಾರ್ಯಕ್ರಮ ಏರ್ಪಟ್ಟಿತ್ತು. ವಿದ್ಯಾರ್ಥಿ ಗುರುದತ್ ಅವರ ಕೊಳಲು ವಾದನ ಹಾಗೂ ವೈಷ್ಣವಿಯವರ ಭರತನಾಟ್ಯ ಎಲ್ಲರ ಮನಸೂರೆಗೊಂಡಿತು.

ಸಂಸ್ಥೆಯ ಸಹಾಯಕ ಕಾರ್ಯದರ್ಶಿ ಆರ್. ಕೃಷ್ಣ, ಪ್ರೊ. ಸುರೇಶ್, ಪ್ರೊ. ಬಿ. ಶಿವರಾಂ, ಪ್ರೊ. ಎಲ್. ಎನ್. ಗೋಪಾಲಕೃಷ್ಣ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಪ್ರಾಚಾರ್ಯ ಪ್ರೊ. ಎಂ.ಆರ್. ಶ್ರೀನಿವಾಸ್, ಮಂಜುಳಾ; ಪ್ರೊ. ಮ್ಯಾಥ್ಯೂ ಪಿ. ಥಾಮಸ್ ವಂದಿಸಿದರು.

ವಿಜಯ ಕರ್ನಾಟಕ, ಬೆಂಗಳೂರು.
ಗುರುವಾರ 7 ಸೆಪ್ಟೆಂಬರ್ 2006

# ಭಾರತ-ನಿರ್ಮಾಣ ಪ್ರಚಾರಾಂದೋಲನ ಸಮಾರೋಪ

ಯಲಹಂಕ, ಸೆ. 6- ಭಾರತ ನಿರ್ಮಾಣ ಪ್ರಚಾರಾಂದೋಲನದ ಸಮಾರೋಪ ಬುಧವಾರ ನಡೆಯಿತು.

ವಾರ್ತಾ ಇಲಾಖೆಯ 2 ಘಟಕಗಳು, ಸಂಗೀತ ಮತ್ತು ನಾಟಕ ವಿಭಾಗದ 8 ತಂಡ ಪಾಲ್ಗೊಂಡಿದ್ದವು.

ಬೆಂಗಳೂರು ಪೂರ್ವ ಮತ್ತು ಉತ್ತರ ತಾಲೂಕುಗಳ 150 ಗ್ರಾಮಗಳಲ್ಲಿ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಮಹಿಳೆಯರಿಗೆ ಮತ್ತು ಮಕ್ಕಳಿಗೆ ಸ್ಪರ್ಧೆ ಏರ್ಪಡಿಸುವ ಜತೆಗೆ ಏಡ್ಸ್ ಅರಿವು, ಚಿಕೂನ್‌ಗುನ್ಯಾ ಕುರಿತ ಚಲನಚಿತ್ರ, ಮಕ್ಕಳಿಗಾಗಿ ಚಲನಚಿತ್ರ ಪ್ರದರ್ಶಿಸಲಾಯಿತು. ಕೇಂದ್ರ ವಾರ್ತಾ ಇಲಾಖೆಯ ಉಪ ನಿರ್ದೇಶಕಿ ಅರ್ಚನಾದತ್ತ, ವಾರ್ತಾ ಪ್ರಸಾರ ಇಲಾಖೆಯ ಉಪ ನಿರ್ದೇಶಕಿ ಪಲ್ಲವಿಚಿಣ್ಯ, ಶೇಷಾದ್ರಿಪುರ ಕಾಲೇಜಿನ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ, ಪ್ರಾಚಾರ್ಯ ಡಾ. ಪ್ರಕಾಶ್ ಹಾಜರಿದ್ದರು.

# ಮೂರು ವರ್ಷದಲ್ಲಿ ಕಟ್ಟಕಡೆಯ ವ್ಯಕ್ತಿಗೂ ಸೌಲಭ್ಯ

ಯಲಹಂಕ, ಸೆ. 1-ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿಗೆ ಒಂದು ಲಕ್ಷ 74 ಸಾವಿರ ಕೋಟಿ ರೂ. ಖರ್ಚು ಮಾಡುವುದರ ಮೂಲಕ 2009 ರೊಳಗೆ 'ಭಾರತ ನಿರ್ಮಾಣ' ಸಮಯಬದ್ಧ ಯೋಜನೆಯನ್ನು ಗ್ರಾಮದ ಕಟ್ಟಕಡೆಯ ವ್ಯಕ್ತಿಗೆ ಮುಟ್ಟಿಸಲಾಗುವುದು ಎಂದು ಕೇಂದ್ರ ಭೂ ಸಾರಿಗೆ ರಾಜ್ಯ ಸಚಿವ ಕೆ.ಎಚ್. ಮುನಿಯಪ್ಪ ಹೇಳಿದರು.

ಯಲಹಂಕದ ಶೇಷಾದ್ರಿಪುರಂ ಕಾಲೇಜು ಆವರಣದಲ್ಲಿ ಏರ್ಪಡಿಸಿರುವ 'ಭಾರತ ನಿರ್ಮಾಣ' ಮಾಹಿತಿ ಪ್ರಚಾರಾಂದೋಲನ ಉದ್ಘಾಟಿಸಿ ಮಾತನಾಡಿದರು.

ವಿದ್ಯುತ್ ಸಂಪರ್ಕವಿಲ್ಲದ 60 ಸಾವಿರ ಹಳ್ಳಿಗಳಿಗೆ ವಿದ್ಯುದೀಕರಣ, ಕುಡಿಯುವ ನೀರು ವಂಚಿತ 54 ಸಾವಿರ ಗ್ರಾಮಗಳಿಗೆ ಶುದ್ಧ ನೀರು ಪೂರೈಸುವುದು. ಒಂದು ಸಾವಿರ ಜನಸಂಖ್ಯೆ ಇರುವ ಮತ್ತು ಗುಡ್ಡಗಾಡು ಹಾಗೂ ಗಿರಿಜನ ಪ್ರದೇಶಗಳಲ್ಲಿ 500 ಜನಸಂಖ್ಯೆ ಇರುವ ಎಲ್ಲ ಗ್ರಾಮಗಳಿಗೆ ರಸ್ತೆ ಸಂಪರ್ಕ ಕಲ್ಪಿಸುವುದು, ಗ್ರಾಮೀಣ ಬಡಜನರಿಗೆ 60 ಲಕ್ಷ ಮನೆಗಳ ನಿರ್ಮಾಣ, ದೂರವಾಣಿ ಸೌಲಭ್ಯ ವಂಚಿತ 66,822 ಗ್ರಾಮಗಳಿಗೆ ಟೆಲಿಫೋನ್ ಸೌಲಭ್ಯ ಕಲ್ಪಿಸುವುದು ಯೋಜನೆಯ ಉದ್ದೇಶ ಎಂದರು.



'ಭಾರತ ನಿರ್ಮಾಣ' ಸಾರ್ವಜನಿಕ ಮಾಹಿತಿ ಪ್ರಚಾರಾಂದೋಲನ ಕಾರ್ಯಕ್ರಮವನ್ನು ಕೇಂದ್ರ ಸಚಿವ ಕೆ.ಎಚ್. ಮುನಿಯಪ್ಪ ಉದ್ಘಾಟಿಸಿದರು. ಕೇಂದ್ರ ಸಚಿವ ಎಂ.ವಿ. ರಾಜಶೇಖರನ್ ಹಾಜರಿದ್ದರು.

ಈ ಯೋಜನೆಯ ಕಾರ್ಯಕ್ರಮವನ್ನು ಪ್ರತಿ ರಾಜ್ಯ ಸರಕಾರಗಳು ಜವಾಬ್ದಾರಿಯುತವಾಗಿ ಅನುಷ್ಠಾನ ಗೊಳಿಸಿದರೆ ನಾಲ್ಕೈದು ವರ್ಷಗಳಲ್ಲಿ ಕಟ್ಟಕಡೆಯ ವ್ಯಕ್ತಿಗೂ ಎಲ್ಲ ಸೌಲಭ್ಯ ಕೊಡಬಹುದು. ಇದಕ್ಕೆ ಅಧಿಕಾರಿಗಳು ಪ್ರಾಮಾಣಿಕವಾಗಿ ಕಾರ್ಯೋನ್ಮುಖರಾಗಬೇಕಾಗಿದೆ ಎಂದು ಸೂಚಿಸಿದರು.

ಆಹಾರ ಮತ್ತು ಪೌಷ್ಟಿಕಾಂಶ ಮಂಡಳಿ (ಬೆಂಗಳೂರು) ಪ್ರಕಟಿಸಿದ 'ಪೌಷ್ಟಿಕಾಂಶ ಸಾಕ್ಷರತೆ' ಎಂಬ ಕನ್ನಡ ಭಾಷೆಯ ಕಿರು ಹೊತ್ತಿಗೆಯನ್ನು ಕೇಂದ್ರ ಸಚಿವ ಎಂ.ವಿ. ರಾಜಶೇಖರನ್ ಬಿಡುಗಡೆ ಮಾಡಿದರು.

ಕೇಂದ್ರ ವಾರ್ತಾ ಇಲಾಖೆ, ಕ್ಷೇತ್ರ ಪ್ರಚಾರ ನಿರ್ದೇಶನಾಲಯ ಹಾಗೂ ರಾಜ್ಯ ಸರಕಾರದ ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಂಡಿರುವ 'ಸಾರ್ವಜನಿಕ ಮಾಹಿತಿ ಪ್ರಚಾರಾಂದೋಲನ'ದಲ್ಲಿ ವಸ್ತು ಪ್ರದರ್ಶನ, ಸರಕಾರದ ನಾನಾ ಕಾರ್ಯಕ್ರಮಗಳ ಕುರಿತಂತೆ ಜಾಹೀರಾತು, ಶ್ರವ್ಯ-ದೃಶ್ಯ ಪ್ರದರ್ಶನ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ, ಕಾನೂನು ಮಾಹಿತಿ ಹಕ್ಕು ಕುರಿತಂತೆ ಸಾಕ್ಷ್ಯ ಚಿತ್ರ, ವಸ್ತುಪ್ರದರ್ಶನ ಏರ್ಪಡಿಸಿದ್ದರು.

ಅಂತರ ಮಾಧ್ಯಮ ಪ್ರಚಾರ ಸಮನ್ವಯ ಸಮಿತಿ ಅಧ್ಯಕ್ಷ ಎ.ಪಿ. ಫ್ರಾಂಕ್ ನರೋನ, ಪಿಐಬಿ ಉಪ ಮಹಾ ನಿರ್ದೇಶಕಿ ಅರ್ಚನಾ ದತ್ತ, ಬೆಂಗಳೂರು ನಗರ ಜಿ.ಪಂ ಸಿಇಒ ಸಿ. ಸೋಮಶೇಖರ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಬೆಂಗಳೂರು ಜಿ.ಪಂ ಅಧ್ಯಕ್ಷೆ ರೇಣುಕಾ ಗೋಪಾಲಕೃಷ್ಣ, ಉಪಾಧ್ಯಕ್ಷ ಎ.ಸಿ. ಶ್ರೀನಿವಾಸ್, ಸದಸ್ಯ ಅಶೋಕನ್, ಯಲಹಂಕ ನಗರಸಭೆ ಅಧ್ಯಕ್ಷ ರಮೇಶ್ ಉಪಸ್ಥಿತರಿದ್ದರು.

# ಎಲ್ಲರಿಗೂ ಮೂಲಸೌಕರ್ಯ

**ಯಲಹಂಕ:** ಭಾರತ ನಿರ್ಮಾಣ ಸಮಯಬದ್ಧ ಯೋಜನೆಯಡಿಯಲ್ಲಿ 2009ರ ಒಳಗಾಗಿ 1.74 ಲಕ್ಷ ಕೋಟಿ ರೂಪಾಯಿ ವೆಚ್ಚದಲ್ಲಿ ಕುಡಿಯುವ ನೀರು, ರಸ್ತೆ ಅಭಿವೃದ್ಧಿ, ವಿದ್ಯುತ್ ಹಾಗೂ ದೂರವಾಣಿ ಸೌಲಭ್ಯಗಳನ್ನು ರಾಷ್ಟ್ರದ ಕಟ್ಟಕಡೆಯ ವ್ಯಕ್ತಿಗೆ ತಲುಪಿಸುವ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರ ರೂಪಿಸಿದೆ ಎಂದು ಕೇಂದ್ರ ಭೂಸಾರಿಗೆ ರಾಜ್ಯ ಸಚಿವ ಕೆ.ಎಚ್. ಮುನಿಯಪ್ಪ ಹೇಳಿದರು.

ಇಲ್ಲಿನ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನ ಆವರಣದಲ್ಲಿ ಕೇಂದ್ರ ವಾರ್ತಾ ಮತ್ತು ಪ್ರಸಾರ ಇಲಾಖೆ ಆಶ್ರಯದಲ್ಲಿ ಏರ್ಪಡಿಸಿರುವ ಐದು ದಿನಗಳ "ಭಾರತ ನಿರ್ಮಾಣ" ಪ್ರದರ್ಶನ ಉದ್ಘಾಟನ ಸಮಾರಂಭ ... ಅವರು ಮಾತನಾಡಿದರು.

ಕೇಂದ್ರ ಸರ್ಕಾರದ ಈ ಯೋಜನೆಯನ್ನು ರಾಜ್ಯ ಸರ್ಕಾರಗಳು ಜವಾಬ್ದಾರಿಯುತವಾಗಿ ಅನುಷ್ಠಾನಗೊಳಿಸಿದರೆ 5 ವರ್ಷಗಳಲ್ಲಿ ಎಲ್ಲ ಜನರಿಗೂ ಈ ಸೌಲಭ್ಯ ದೊರೆಯಲು ಸಾಧ್ಯವಾಗುತ್ತದೆ ಎಂದು ಭರವಸೆ ನೀಡಿದರು.

ಸಚಿವಾಲಯದ ಆಹಾರ ಮತ್ತು ಪೌಷ್ಠಿಕಾಂಶ ಮಂಡಳಿ ಪ್ರಕಟಿಸಿದ "ಪೌಷ್ಠಿಕಾಂಶ ಸಾಕ್ಷರತೆ" ಎಂಬ ಕನ್ನಡ ಭಾಷೆಯ ಕಿರು ಹೊತ್ತಿಗೆಯನ್ನು ಬಿಡುಗಡೆಗೊಳಿಸಿ ಮಾತನಾಡಿದ ಕೇಂದ್ರ ಯೋಜನಾ ಖಾತೆ ರಾಜ್ಯ ಸಚಿವ ಎಂ.ವಿ. ರಾಜಶೇಖರನ್, ದೇಶದ ಪ್ರಗತಿಗೆ ಮಾಹಿತಿಯ ಪ್ರಸರಣ ಮತ್ತು ಹಂಚಿಕೆ ಅಗತ್ಯವಾಗಿದ್ದು, ಕೆಲವು ರಾಷ್ಟ್ರೀಯ ಕಾರ್ಯಕ್ರಮಗಳು ಮಾಹಿತಿಯ ಕೊರತೆಯಿಂದಾಗಿ ತಲುಪಬೇಕಾದ ಜನರನ್ನು ತಲುಪದೆ ಅರ್ಧಕ್ಕೆ ನಿಂತಿರುವುದು ಮತ್ತು ವಿಫಲವಾಗಿರುವುದು ಉಂಟು. ಈ ನಿಟ್ಟಿನಲ್ಲಿ ಕೇಂದ್ರ - ರಾಜ್ಯ ಸರ್ಕಾರದ ಎಲ್ಲ ಇಲಾಖೆಗಳು ಇಂತಹ ಕಾರ್ಯಕ್ರಮಗಳ ಸೌಲಭ್ಯಗಳು ಜನರಿಗೆ ತಲುಪುವಂತೆ ಮಾಡಬೇಕು ಎಂದು ಸಲಹೆ ನೀಡಿದರು.

ಅಂತರ ಮಾಧ್ಯಮ ಪ್ರಚಾರ ಸಮನ್ವಯ ಸಮಿತಿ ಅಧ್ಯಕ್ಷ ಎ.ಪಿ. ಫ್ರ್ಯಾಂಕ್ ನರೋನ, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೆ. ಪಿ.ಕೃಷ್ಣ ಹಾಗೂ ನಗರಸಭೆ ಅಧ್ಯಕ್ಷ ಎಂ.ರಮೇಶ್ ಮಾತನಾಡಿದರು.

ಜಿ.ಪಂ. ಅಧ್ಯಕ್ಷೆ ರೇಣುಕಾ ಗೋಪಾಲಕೃಷ್ಣ, ಉಪಾಧ್ಯಕ್ಷ ಎ.ಸಿ. ಶ್ರೀನಿವಾಸ್, ಸದಸ್ಯ ಅಶೋಕ್, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಡಾ. ಸಿ.ಸೋಮಶೇಖರ್, ಕೇಂದ್ರ ವಾರ್ತಾ ಶಾಖೆ ಉಪಮಹಾ ನಿರ್ದೇಶಕಿ ಅರ್ಚನಾ ದತ್ತ, ಕ್ಷೇತ್ರ ಪ್ರಚಾರ ನಿರ್ದೇಶನಾಲಯದ ಮಹಾ ನಿರ್ದೇಶಕ ದೀಪಂಕರ್ ಮುಖ್ಯೋಪಾಧ್ಯಾಯ ಭಾಗವಹಿಸಿದ್ದರು.

ಮಾಹಿತಿ ಪ್ರಚಾರಾಂದೋಲನದ ಅಂಗವಾಗಿ ಏರ್ಪಡಿಸಿರುವ ವಸ್ತು ಪ್ರದರ್ಶನ ಹಾಗೂ ಮಾರಾಟ ಮೇಳದಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಸಂಸ್ಥೆಗಳು, ಸಾರ್ವಜನಿಕ ಉದ್ದಿಮೆಗಳ 54 ಮಳಿಗೆಗಳನ್ನು ಸ್ಥಾಪಿಸಲಾಗಿದೆ.

ಕೆಪಿಎನ್ ಚಿತ್ರ

ಪ್ರೆಸ್ ಇನ್ಫರ್ಮೇಷನ್ ಬ್ಯೂರೊ ಶುಕ್ರವಾರ ಬೆಂಗಳೂರು ಹೊರವಲಯದ ಯಲಹಂಕದಲ್ಲಿ ಆಯೋಜಿಸಿದ್ದ 'ಭಾರತ ನಿರ್ಮಾಣ' ಪ್ರಚಾರದ ಅಂಗವಾಗಿ ಪ್ರದರ್ಶಿಸಲಾಗಿದ್ದ ಛಾಯಾಚಿತ್ರಗಳನ್ನು ಮಹಿಳೆಯರು ಆಸಕ್ತಿಯಿಂದ ವೀಕ್ಷಿಸಿದರು.



'ಕಾನೂನು ಅರಿವು ಮತ್ತು ನೆರವು' ಶಿಬಿರವನ್ನು ಎನ್.ಕೆ. ಪಾಟೀಲ್ ಉದ್ಘಾಟಿಸಿದರು. ಬಿ.ಎಸ್. ಇಂದ್ರಕಲಾ, ವೂಡೇ ಪಿ. ಕೃಷ್ಣ ಟಿ.ಎನ್. ಮಂಜುಳಾದೇವಿ ಹಾಜರಿದ್ದರು.

# ವಿದ್ಯಾರ್ಥಿಗಳಲ್ಲಿ ಜೀವನ ಹಾಗೂ ವೃತ್ತಿಮೌಲ್ಯ ಅಳವಡಿಕೆ ಅಗತ್ಯ

ಬೆಂಗಳೂರು: ಜೀವನದ ಮೌಲ್ಯಗಳು ಮತ್ತು ವೃತ್ತಿ ಜೀವನದ ಮೌಲ್ಯಗಳನ್ನು ವಿದ್ಯಾರ್ಥಿಗಳು ಅಳವಡಿಸಿಕೊಳ್ಳಬೇಕು ಎಂದು ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಎನ್.ಕೆ. ಪಾಟೀಲ್ ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಕಾನೂನು ಮಹಾವಿದ್ಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ ತಾಲೂಕು, ಕಾನೂನು ಸೇವೆಗಳ ಸಮಿತಿ ಮತ್ತು ದೇವನಹಳ್ಳಿ ವಕೀಲರ ಸಂಘಗಳ ಸಂಯುಕ್ತಾಶ್ರಯದಲ್ಲಿ ದೇವನಹಳ್ಳಿಯ ಮೀನಕುಂಟೆ ಹೊಸೂರು ಗ್ರಾಮದಲ್ಲಿ ಇತ್ತೀಚೆಗೆ ಏರ್ಪಡಿಸಿದ್ದ 'ಕಾನೂನು ಅರಿವು ಮತ್ತು ನೆರವು' ಶಿಬಿರ ಉದ್ಘಾಟಿಸಿ ಮಾತನಾಡುತ್ತಿದ್ದರು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಾದ ಬಿ.ಎಸ್. ಇಂದ್ರಕಲಾ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಹಿರಿಯ ನ್ಯಾಯ ವಾದಿ ಟಿ.ಎನ್. ಮಂಜುಳಾದೇವಿ ಮತ್ತಿತರರು ಉಪಸ್ಥಿತರಿದ್ದರು.

ಕರ್ನಾಟಕ ನ್ಯಾಯಾಂಗ ಅಕಾಡೆಮಿ ನಿರ್ದೇಶಕ ಅರಳಿ ನಾಗರಾಜ ಕಾನೂನು ನೆರವು ಬಗ್ಗೆ ಉಪನ್ಯಾಸ ನೀಡಿದರು.

ಪ್ರಜಾವಾಣಿ
ಭಾನುವಾರ 27ನೇ ಆಗಸ್ಟ್ 2006

# ಸಾಧನೆಯ ಕನಸಿರಬೇಕು

ಯಲಹಂಕ: ಜೀವನದಲ್ಲಿ ಪ್ರಗತಿ ಸಾಧಿಸಲು ಮೊದಲು ಕನಸು ಕಾಣಬೇಕು. ಆಗ ಮಾತ್ರ ಆ ಕನಸುಗಳು ಸಾಕಾರಗೊಳ್ಳಲು ಸಾಧ್ಯ ಎಂದು ರಿಟೇನ್ ಫಾಸ್ಫರ್ ಕೆಮಿಕಲ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕ ಜಿ. ಶ್ರೀನಿವಾಸ್ ಪ್ರಸಾದ್ ಹೇಳಿದರು.

ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಶುಕ್ರವಾರ ಪ್ರಸ್ತುತ ಸಾಲಿನ ಎಂ.ಬಿ.ಎ. ತರಗತಿ ಉದ್ಘಾಟಿಸಿ ಅವರು ಮಾತನಾಡಿದರು.

ಶೇಷಾದ್ರಿಪುರಂ ಎಜುಕೇಷನ್ ಟ್ರಸ್ಟ್‌ನ ಪ್ರಧಾನ ಕಾರ್ಯದರ್ಶಿ ಪಿ.ಕೃಷ್ಣ ಮಾತನಾಡಿ, ನಿರಂತರ ಕಲಿಕೆಯಲ್ಲಿ ತೊಡಗಿದರೆ ಮಾತ್ರ ವೃತ್ತಿ ಜೀವನದ ಏರಿಳಿತಗಳನ್ನು ಎದುರಿಸಲು ಸಾಧ್ಯ ಎಂದು ವಿದ್ಯಾರ್ಥಿಗಳಿಗೆ ಕಿವಿ ಮಾತು ಹೇಳಿದರು.

ಸಂಸ್ಥೆಯ ಅಧ್ಯಕ್ಷ ಕೆ.ಎಂ.ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು. ಉಪಾಧ್ಯಕ್ಷ ಪಂಡಿತಾರಾಧ್ಯ, ಟ್ರಸ್ಟಿಗಳಾದ, ಸರೋಜಾ ನಂಜಪ್ಪ, ಡಬ್ಲ್ಯು.ಪಿ.ಅನಿಲ್‌ಕುಮಾರ್, ವೀರಭದ್ರಯ್ಯ ಉಪಸ್ಥಿತರಿದ್ದರು. ಪ್ರಾಂಶುಪಾಲ ಡಾ. ಎಂ. ಪ್ರಕಾಶ್ ಸ್ವಾಗತಿಸಿದರು. ಉಪನ್ಯಾಸಕಿ ಪಾವನ ದಿಬ್ಬೂರು ಕಾರ್ಯಕ್ರಮ ನಿರೂಪಿಸಿದರು. ಸಂಸ್ಥೆಯ ನಿರ್ದೇಶಕಿ ಡಾ. ಮೀರಾ ದೀಕ್ಷಿತ್ ವಂದಿಸಿದರು.




ಶೇಷಾದ್ರಿಪುರಂ ಪದವಿಪೂರ್ವ ಕಾಲೇಜಿನ ಅಕಾಡೆಮಿ ಆಫ್ ಬಿಜಿನೆಸ್ ಸ್ಟಡೀಸ್ ಹಾಗೂ ರಾಮಕೃಷ್ಣ ಧ್ಯಾನ ಮಂದಿರದ ಸಂಯುಕ್ತಾಶ್ರಯದಲ್ಲಿ ನಡೆದ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಸಮಾರಂಭದಲ್ಲಿ ಶ್ರೀ ನಿರ್ಭಯಾನಂದ ಸರಸ್ವತಿ ಸ್ವಾಮೀಜಿ ಉಪನ್ಯಾಸ ನೀಡಿದರು. ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಕೆ.ಎಂ. ನಂಜಪ್ಪ ಹಾಗೂ ಗೌರವ ಕಾರ್ಯದರ್ಶಿ ಪಿ. ಕೃಷ್ಣ ಹಾಜರಿದ್ದರು.

# ಬೆಂಗಳೂರಿನ ನಂಬರ್. ಒನ್ ಶಿಕ್ಷಣ ಸಂಸ್ಥೆಯಾಗಿ ಶೇಷಾದ್ರಿಪುರಂ ವಿದ್ಯಾ ಸಂಸ್ಥೆ

ಸ್ಪರ್ಧಾತ್ಮಕ ಯುಗದಲ್ಲಿ ಪೈಪೋಟಿ ಎದುರಿಸಲು ವಿದ್ಯಾರ್ಥಿಗಳನ್ನು ಸಜ್ಜುಗೊಳಿಸಬೇಕಾದ ದೊಡ್ಡ ಜವಾಬ್ದಾರಿ ಶಿಕ್ಷಣ ಸಂಸ್ಥೆಗಳ ಮೇಲಿದೆ.

ಅತ್ಯಾಧುನಿಕತೆ, ಹೊಸತನ ಅಳವಡಿಸಿಕೊಂಡು, ರಾಷ್ಟ್ರ ಮತ್ತು ಅಂತಾರಾಷ್ಟ್ರೀಯಮಟ್ಟದಲ್ಲಿ ಯೋಗ್ಯ ನೌಕರಿ ಗಿಟ್ಟಿಸಲು ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವುದು ಅತ್ಯವಶ್ಯಕ.

ಈ ನಿಟ್ಟಿನಲ್ಲಿ ಬೆಂಗಳೂರಿನಲ್ಲಿರುವ ಶೇಷಾದ್ರಿಪುರ್ ವಿದ್ಯಾಸಂಸ್ಥೆ ಮುಂಚೂಣಿ ಸಂಸ್ಥೆಗಳಲ್ಲಿ ಒಂದಾಗಿದೆ ಎಂದರೆ ಅತಿಶಯೋಕ್ತಿಯಾಗದು.



ಶೇಷಾದ್ರಿಪುರ್ ಸೇರಿದಂತೆ ನಗರದ ಹಲವು ಕಡೆಗಳಲ್ಲಿ ಈ ವಿದ್ಯಾಸಂಸ್ಥೆ ಅತ್ಯಂತ ಶ್ರದ್ಧೆ ಮತ್ತು ಬದ್ಧತೆಯಿಂದ ವಿದ್ಯಾರ್ಥಿಗಳಿಗೆ ನವನವೀನ ಮಾದರಿಗಳನ್ನು ಅಳವಡಿಸಿಕೊಂಡು ವಿದ್ಯಾರ್ಥಿಗಳಿಗೆ ಬೋಧನೆ ಮತ್ತು ತರಬೇತಿ ನೀಡುತ್ತಿದೆ.

ನುರಿತ ತಜ್ಞರು, ಅನುಭವಿ ಪ್ರಾಧ್ಯಾಪಕರು ಸೇರಿ ಸಂಸ್ಥೆಯನ್ನು ಹುಟ್ಟುಹಾಕಿದರು. ಅಲ್ಲಿಂದೀಚೆಗೆ ವಿದ್ಯಾರ್ಥಿಗಳಿಗೆ ಅತ್ಯುತ್ತಮ ಗುಣಮಟ್ಟದ ಶಿಕ್ಷಣ ನೀಡುತ್ತ ಯಶಸ್ವಿಯಾಗಿ ಮುನ್ನಡೆದಿದೆ.

ಮ್ಯಾನೇಜ್‌ಮೆಂಟ್ ಮತ್ತು ತಂತ್ರಜ್ಞಾನ ವಿಭಾಗಗಳಲ್ಲಿ ಹಲವಾರು ಕೋರ್ಸ್‌ಗಳನ್ನು ತೆರೆಯಲಾಗಿದೆ.

ಸಾಮಾನ್ಯ ಕೋರ್ಸ್‌ಗಳ ಜತೆ ಪ್ರಾಮುಖ್ಯವಾದ ಇತರ ಕೋರ್ಸ್‌ಗಳನ್ನು ನಡೆಸುತ್ತಿದೆ. ಬಿಸಿನೆಸ್ ಸಮಸ್ಯೆಗಳ ಪರಿಹಾರ ಕಂಡುಕೊಳ್ಳಲು ಅತ್ಯಾಧುನಿಕ ಕಂಪ್ಯೂಟರ್ ಸಾಫ್ಟ್‌ವೇರ್‌ಗಳನ್ನು ಬಳಸಿಕೊಳ್ಳಲಾಗುತ್ತಿದೆ.

ಇಲ್ಲಿ ವಿದ್ಯಾರ್ಜನೆ ಮಾಡುವ ವಿದ್ಯಾರ್ಥಿಗಳು ತಮ್ಮ ವ್ಯಕ್ತಿತ್ವ ವಿಕಸನ ಮಾಡಿಕೊಳ್ಳುವುದರ ಜತೆಗೆ, ಜೀವನದಲ್ಲಿ ಸಾಮರ್ಥ್ಯ ವೃದ್ಧಿ ಮತ್ತು ವಿಶ್ವಾಸವನ್ನು ವೃದ್ಧಿಸಿಕೊಳ್ಳಲು ಅಗತ್ಯ ತಿಳುವಳಿಕೆ ನೀಡಲಾಗುತ್ತಿದೆ.

ಪ್ರತಿಯೊಬ್ಬ ವಿದ್ಯಾರ್ಥಿ ಪ್ರಮುಖ ರಾಷ್ಟ್ರೀಯ ಸಂಸ್ಥೆಗಳಲ್ಲಿ ಉನ್ನತ ಹುದ್ದೆ ಗಳಿಸಲು ಸಂಸ್ಥೆ ಎಲ್ಲ ರೀತಿಯ ಸಹಾಯ ಸಹಕಾರ ನೀಡುತ್ತಿದೆ.

ಉನ್ನತ ಶಿಕ್ಷಣ ಮುಂದುವರೆಸಲು ಸೂಕ್ತ ಮಾರ್ಗ ದರ್ಶನ ನೀಡಲಾಗುತ್ತಿದೆ.

ನಮ್ಮ ಉದ್ದೇಶಿತ ಗುರಿ ಸಾಧನೆಗೆ ಗುಣಮಟ್ಟದ ಅನುಭವಿ ಬದ್ಧತೆಯುಳ್ಳ ಬೋಧನಾ ಸಿಬ್ಬಂದಿ ಇರಬೇಕೆಂಬ ವಿಚಾರದಲ್ಲಿ ಈ ವಿದ್ಯಾಸಂಸ್ಥೆಗೆ ಪೂರ್ಣ ವಿಶ್ವಾಸವಿದೆ.

ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಹಾಗೂ ಕಲಿಕೆಗೆ ಅಗತ್ಯವಿರುವ ಎಲ್ಲಾ ಸೌಲಭ್ಯಗಳನ್ನು ಕಲಿಸಲಾಗಿದೆ.

ಕ್ಯಾರಿಯರ್ ಅಡ್ವೈಜರಿ ಸರ್ವೀಸ್ ಮುಂತಾದ ಸೌಲಭ್ಯಗಳೂ ಇಲ್ಲಿವೆ.

ವಿದ್ಯಾರ್ಥಿಗಳ ಆರೋಗ್ಯ ಸಂರಕ್ಷಣೆಗೆ ಸಂಸ್ಥೆ ಹೆಚ್ಚು ಆದ್ಯತೆ ನೀಡಿದೆ.

## ಗ್ರಂಥಾಲಯ.....

ಅತ್ಯಾಧುನಿಕ ಹಾಗೂ ಸುಸಜ್ಜಿತ ಮಾದರಿ ಗ್ರಂಥಾಲಯ ಇಲ್ಲಿದೆ. ಎಲ್ಲಾ ರೀತಿಯ ಪಠ್ಯಪುಸ್ತಕಗಳು, ನಿಯತಕಾಲಿಕಗಳು ಹಾಗೂ ಇತರ ಪುಸ್ತಕಗಳು ಇಲ್ಲಿ ಲಭ್ಯ.

## ಕಂಪ್ಯೂಟರ್ ಲ್ಯಾಬ್

ಕಂಪ್ಯೂಟರ್ ಲ್ಯಾಬ್ ಹಾಗೂ ಕಂಪ್ಯೂಟರ್ ಸೇವಾ ಕೇಂದ್ರಗಳನ್ನು ತೆರೆಯಲಾಗಿದೆ. ಇಂಟರ್‌ನೆಟ್ ಮತ್ತು ಮಲ್ಟಿ ಮೀಡಿಯಾ ಸೌಲಭ್ಯಗಳೂ ಲಭ್ಯವಿರುತ್ತದೆ.

## ತರಬೇತಿ ಕೇಂದ್ರ

ಅತ್ಯಾಧುನಿಕ ತರಬೇತಿ ಕೇಂದ್ರವೊಂದನ್ನು ತೆರೆಯಲಾಗಿದೆ. ಜತೆಗೆ ಪ್ಲೇಸ್‌ಮೆಂಟ್ ಘಟಕವೊಂದು ಇಲ್ಲಿ ನಿರಂತರವಾಗಿ ಕೆಲಸ ಮಾಡುತ್ತಿದೆ. ಖ್ಯಾತ ಬ್ಯಾಂಕ್ ಸೇರಿದಂತೆ ದೇಶ, ವಿದೇಶಗಳ ಪ್ರಮುಖ ಕಂಪನಿಗಳು ಇಲ್ಲಿ ಪದವಿ ಪಡೆದ ಪದವೀಧರರಿಗೆ ಉದ್ಯೋಗ ದೊರಕಿಸುವಲ್ಲಿ ಯಶಸ್ವಿಯಾಗಿದೆ.

ವಿಶೇಷ ಸೌಲಭ್ಯಗಳಿಂದ ಕೂಡಿರುವ ಈ ವಿದ್ಯಾಸಂಸ್ಥೆಯಲ್ಲಿ ಪುರುಷ ಹಾಗೂ ಮಹಿಳಾ ವಿದ್ಯಾರ್ಥಿಗಳಿಗೆ ಪ್ರತ್ಯೇಕವಾದ ಹಾಸ್ಟೆಲ್ ಸೌಲಭ್ಯ, ಆರೋಗ್ಯಕರ ಊಟದ ವ್ಯವಸ್ಥೆ, ಕಾಲೇಜು ಬಸ್‌ಗಳ ವ್ಯವಸ್ಥೆ.




ವಿದ್ಯಾಭ್ಯಾಸಕ್ಕಾಗಿ ಹೊರನಾಡಿನ ನೆರವು ಬಯಸುವ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಲಾಗುತ್ತಿದೆ. ಬ್ಯಾನರ್ ಹೈಟೆಕ್ ಸಿಟಿಯಲ್ಲೊಂದ ಈ ಶೇಷಾದ್ರಿಪುರಂ ವಿದ್ಯಾಸಂಸ್ಥೆ ಎಲ್ಲಾ ರೀತಿಯಲ್ಲೂ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕಾಗಿ ಸಜ್ಜುಗೊಂಡಿದೆ. ದೇಶದಲ್ಲಿ ಬಿಸಿನೆಸ್ ಕಾಲೇಜುಗಳ ಪೈಪೋಟಿ ಶರವೇಗದಲ್ಲಿ ಬೆಳೆದಿದೆ.

ಉತ್ಕೃಷ್ಟ ಶಿಕ್ಷಣ ನೀಡುವಲ್ಲಿ ಸಫಲತೆ ಕಂಡಿರುವ ಈ ವಿದ್ಯಾಸಂಸ್ಥೆ ವಿದ್ಯಾರ್ಥಿಗಳ ಆಶಾಕಿರಣವಾಗಿದೆ.

ಆಧುನಿಕ ಮತ್ತು ಸ್ಪರ್ಧಾತ್ಮಕ ಯುಗದಲ್ಲಿ ಹಲವಾರು ನ್ಯೂನತೆಗಳಿಂದ ಸಾಗುವ ಈ ವಿದ್ಯಾಸಂಸ್ಥೆ ದಿನದಿನೇ ತನ್ನ ಕೀರ್ತಿ ಹೆಚ್ಚಿಸಿಕೊಳ್ಳುತ್ತಿದೆ. ದೇಶದಲ್ಲೇ ಉತ್ತಮ ಕಾಲೇಜು ಎಂದು ಖ್ಯಾತಿ ಪಡೆದಿದೆ.

ಈ ಸಂಸ್ಥೆಯಲ್ಲಿ ಅಭ್ಯಸಿಸುವ ಸಾಕಷ್ಟು ವಿದ್ಯಾರ್ಥಿಗಳಿಗೆ ಉನ್ನತ ಹುದ್ದೆಗಳು ಲಭಿಸಿರುವುದು ಮತ್ತೊಂದು ವಿಶೇಷವಾಗಿದೆ.

## ಶೇಷಾದ್ರಿಪುರಂ ಕಾಲೇಜಿನ ಇತಿಹಾಸ

ಶೇಷಾದ್ರಿಪುರಂ ವಿದ್ಯಾಸಂಸ್ಥೆಯು ಬೆಂಗಳೂರಿನಲ್ಲಿನ ಹಿರಿಯ ಶಿಕ್ಷಣ ಸಂಸ್ಥೆಗಳಲ್ಲಿ ಒಂದಾಗಿದೆ. 1930 ರಲ್ಲಿ ಮೊದಲಿಗೆ ಶ್ರೀ ಸಮಾಜ ಎಂದು ಪ್ರಾರಂಭವಾಯಿತು 1936 ರ ನಂತರ ಅದನ್ನು ಶೇಷಾದ್ರಿಪುರಂ ಎಜುಕೇಷನಲ್ ಅಸೋಸಿಯೇಷನ್ ಎಂಬ ಹೆಸರಿನಲ್ಲಿ ಕಾರ್ಯಾರಂಭ ಮಾಡಿತು.

1936 ರಲ್ಲಿ ಮೊದಲಿಗೆ ಪ್ರಾಥಮಿಕ ಮತ್ತು ಪ್ರೌಢಶಾಲೆ ಸ್ಥಾಪಿಸಲಾಯಿತು. 1939 ರಲ್ಲಿ ಬಾಲಕ ಮತ್ತು ಬಾಲಕಿಯರ ಪ್ರೌಢಶಾಲೆಯನ್ನು ಆರಂಭಿಸಲಾಯಿತು.

1971 ರಲ್ಲಿ ಪಿ.ಯು. ಕಾಲೇಜನ್ನು ಆರಂಭಿಸಲಾಯಿತು. 1974 ರಲ್ಲಿ ಪದವಿ ಕೋರ್ಸನ್ನು ಪ್ರಾರಂಭಿಸಲಾಯಿತು ಒಟ್ಟಾರೆ ಈ ಟ್ರಸ್ಟಿನ ಮುಖಾಂತರ 5 ಶಾಲೆಗಳು 4 ಪಿ.ಯು ಹಾಗೂ 3 ಪ್ರಥಮ ದರ್ಜೆ ಕಾಲೇಜುಗಳನ್ನು ನಡೆಸುತ್ತಿರುವುದು ಇಡಿ ಬೆಂಗಳೂರು ನಗರದಲ್ಲಿ ನಂಬರ್ ವನ್ ಸ್ಥಾನದಲ್ಲಿದೆ.

ಮುಖ್ಯವಾಗಿ ಶೇಷಾದ್ರಿಪುರಂ, ಯಲಹಂಕ ಉಪನಗರ, ಮಾಗಡಿ ರಸ್ತೆ, ಕೆಂಗೇರಿ ಉಪನಗರಗಳಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳು ಯಶಸ್ವಿಯಾಗಿ ಪ್ರತಿಯೊಬ್ಬರ ಕಣ್ಮಣಿಯಾಗಿವೆ.

ಹಲವು ದಶಕಗಳಿಂದ ಮುನ್ನಡೆಸಿಕೊಂಡು ಬಂದಿರುವ ಈ ಶಿಕ್ಷಣ ಸಂಸ್ಥೆ ಪೋಷಕರಿಗೆ ಹಿಡುಕರಾಗಿಲ್ಲ ವಿದ್ಯಾರ್ಥಿಗಳ ಆಶಾಕಿರಣವಾಗಿ ಪ್ರತಿ ವರ್ಷ ಶೇಕಡಾ 100 ರಷ್ಟು ಫಲಿತಾಂಶ ನೀಡುತ್ತಾ ಹೊಸ ನಾಂದಿಯನ್ನು ಪ್ರಾರಂಭಿಸಿ ರುವ ಬೆಂಗಳೂರಿನ ಪ್ರತಿಷ್ಠಿತ ವಿದ್ಯಾಸಂಸ್ಥೆ ಶೇಷಾದ್ರಿಪುರಂ ವಿದ್ಯಾಸಂಸ್ಥೆ.

ಆಡಳಿತ ಮಂಡಳಿಯ ಸದಸ್ಯರು



ಕೆ.ಎಂ.ನಂಜಪ್ಪ
ಅಧ್ಯಕ್ಷರು



ಪಂಡಿತಾರಾಧ್ಯ
ಉಪಾಧ್ಯಕ್ಷರು



ಅನಿಲ್‌ಕುಮಾರ್
ಉಪಾಧ್ಯಕ್ಷರು



ಡಬ್ಲ್ಯೂ.ಪಿ. ಕೃಷ್ಣ
ಪ್ರಧಾನ ಕಾರ್ಯದರ್ಶಿ



ಶ್ರೀನಿವಾಸಯ್ಯ
ಜಂಟಿ ಕಾರ್ಯದರ್ಶಿ



ಹೊಂಬಾರಪ್ಪ
ಖಜಾಂಚಿ



ಆರ್. ಕೃಷ್ಣ
ಸಹಾಯಕ ಕಾರ್ಯದರ್ಶಿ

Edited, Printed, Published & Owned by RAHUL, Mobile : 9448360665, Asst. Editor : P.N. RAMAMURTHY, # 8, 1st Cross, Maheshwara (Muneshwara) Temple Street, Kempapura, Hebbala Post, Bangalore - 560 024. Mobile : 9945404110 Printed at : Sree Seetharama Printers, Kilari Road, Bangalore - 53.

ಸಂಜೆವಾಣಿ
ಭಾನುವಾರ 6 ಆಗಸ್ಟ್ 2006

# ಯುವ ಹಾಸ್ಟೆಲ್‌ಗಳ ದ. ಭಾರತ ಅಧ್ಯಕ್ಷರಾಗಿ ಡಬ್ಲ್ಯು. ಪಿ. ಕೃಷ್ಣ

ಬೆಂಗಳೂರು, ಆ. ೬- ಅಖಿಲ ಭಾರತ ಯುವ ಹಾಸ್ಟೆಲ್‌ಗಳ ಸಂಘದ ದಕ್ಷಿಣ ಭಾರತ ವಿಭಾಗದ ಅಧ್ಯಕ್ಷರಾಗಿ ಶಿಕ್ಷಣ ತಜ್ಞ ಡಬ್ಲ್ಯೂ.ಪಿ. ಕೃಷ್ಣ ಅವರು ಪುನರಾಯ್ಕೆಯಾಗಿದ್ದಾರೆ.

ಮೂರು ವರ್ಷಗಳ ಅವಧಿಗೆ ಅವರು ಆಯ್ಕೆಯಾಗಿದ್ದು, ಉಪಾಧ್ಯಕ್ಷರಾಗಿ ಆರ್. ರಮೇಶ್ ಕುಮಾರ್ ಹಾಗೂ ಶ್ರುತಿ ಶ್ಯಾಮ್ ಸುಂದರ್ ಅವರನ್ನು ಹಾಗೂ ಮತ್ತಿತರ ಪದಾಧಿಕಾರಿಗಳನ್ನು ಆಯ್ಕೆ ಮಾಡಲಾಗಿದೆ.

II | ವಿಜಯ ಕರ್ನಾಟಕ, ಬೆಂಗಳೂರು
ಶುಕ್ರವಾರ 21 ಜುಲೈ 2006



ಯಲಹಂಕ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನಲ್ಲಿ ಪ್ರಥಮ ವರ್ಷದ ಪದವಿ ತರಗತಿಗಳನ್ನು ನಿವೃತ್ತ ನ್ಯಾಯಮೂರ್ತಿ, ಮಾಜಿ ಲೋಕಾಯುಕ್ತ ಎನ್. ವೆಂಕಟಾಚಲ ಉದ್ಘಾಟಿಸಿದರು.

# ಭ್ರಷ್ಟಾಚಾರ ನಿಗ್ರಹಿಸದಿದ್ದರೆ ಅನಾಹುತ

ಯಲಹಂಕ, ಜು. 20 - ಎಲ್ಲಕ್ಷೇತ್ರಗಳಲ್ಲಿ ಭ್ರಷ್ಟಾಚಾರ ಆವರಿಸಿದ್ದು, ನಿರ್ಮೂಲನೆ ಮಾಡದಿದ್ದರೆ ಯುವ ಜನಾಂಗ ಮುಂದಿನ ದಿನಗಳಲ್ಲಿ ಅಪಾಯ ಎದುರಿಸಬೇಕಾಗುತ್ತದೆ ಎಂದು ನಿವೃತ್ತ ಲೋಕಾಯುಕ್ತ ನ್ಯಾಯಮೂರ್ತಿ ಎನ್. ವೆಂಕಟಾಚಲ ವಿದ್ಯಾರ್ಥಿಗಳಿಗೆ ತಿಳಿಸಿದರು.

ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಪ್ರಥಮ ವರ್ಷದ ಪದವಿ ತರಗತಿ ಉದ್ಘಾಟಿಸಿ ಮಾತನಾಡಿದರು.

ರಾಜ್ಯದಲ್ಲಿ ಎಲ್ಲ ತಾಲೂಕು ಕಚೇರಿ, ಆಸ್ಪತ್ರೆ , ಸಾರ್ವಜನಿಕ ಕಚೇರಿಗಳಲ್ಲಿ ಭ್ರಷ್ಟಾಚಾರ ನೋಡಿದ್ದೇನೆ. ಭ್ರಷ್ಟಾಚಾರ ಭಯೋತ್ಪಾದನೆಗಿಂತ ಅಪಾಯಕಾರಿ ಎಂದು ಹೇಳಿದರು.



ವಿದ್ಯಾರ್ಥಿಗಳು ಭ್ರಷ್ಟಾಚಾರದ ವಿರುದ್ಧ ಸಂಘಟಿತರಾಗಿ ಹೋರಾಡಬೇಕೆಂದು ಹೇಳಿದರು.

ಶೇಷಾದ್ರಿಪುರಂ ಎಜುಕೇಷನ್ ಟ್ರಸ್ಟ್ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಮಾತನಾಡಿದರು. ಸಂಸ್ಥೆಯ ಅಧ್ಯಕ್ಷ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು. ನ್ಯಾ.ಎನ್.ವೆಂಕಟಾಚಲರನ್ನು ಸನ್ಮಾನಿಸಲಾಯಿತು.

ಸಂಸ್ಥೆಯ ಟ್ರಸ್ಟಿ ಸರೋಜ ನಂಜಪ್ಪ, ಜಂಟಿ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಜಿ. ರಾಮಕೃಷ್ಣ, ಕೃಷ್ಣಸ್ವಾಮಿ, ಎಂ. ಗೋಪಾಲ್ ಹಾಜರಿದ್ದರು. ಪ್ರಾಚಾರ್ಯ ಡಾ. ಎಂ. ಪ್ರಕಾಶ್ ಸ್ವಾಗತಿಸಿದರು.

ರಾಜ್ಯ | ಪ್ರಜಾವಾಣಿ

ಗುರುವಾರ 20ನೇ ಜುಲೈ 2006



ನಿವೃತ್ತ ಲೋಕಾಯುಕ್ತ, ನ್ಯಾಯಮೂರ್ತಿ ಎನ್. ವೆಂಕಟಾಚಲ ಅವರು ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮದರ್ಜೆ ಕಾಲೇಜಿನಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಪ್ರಥಮ ವರ್ಷದ ಪದವಿ ತರಗತಿಗಳನ್ನು ಬುಧವಾರ ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.

# ಭ್ರಷ್ಟಾಚಾರ ಹೆಚ್ಚು ಅಪಾಯಕಾರಿ

**ಯಲಹಂಕ:** ಭ್ರಷ್ಟಾಚಾರ ಭಯೋತ್ಪಾದನೆಗಿಂತ ಅಪಾಯಕಾರಿ ಎಂದು ನಿವೃತ್ತ ಲೋಕಾಯುಕ್ತ ನ್ಯಾಯಮೂರ್ತಿ ಎನ್. ವೆಂಕಟಾಚಲ ಹೇಳಿದರು.

ಇಲ್ಲಿಯ ಉಪನಗರದ ಶೇಷಾದ್ರಿಪುರಂ ಪ್ರಥಮದರ್ಜೆ ಕಾಲೇಜಿನಲ್ಲಿ ಬುಧವಾರ ಪ್ರಥಮ ವರ್ಷದ ಪದವಿ ತರಗತಿಗಳನ್ನು ಉದ್ಘಾಟಿಸಿ ಮಾತನಾಡಿದ ಅವರು, ದೇಶದೆಲ್ಲೆಡೆ ಹರಡಿರುವ ಆತಂಕಕಾರಿ ಭ್ರಷ್ಟಾಚಾರವನ್ನು ಮಟ್ಟಹಾಕದಿದ್ದರೆ ಮುಂದಿನ ದಿನಗಳಲ್ಲಿ ಭಾರೀ ಅನಾಹುತ ಎದುರಿಸಬೇಕಾಗುತ್ತದೆ ಎಂದು ಎಚ್ಚರಿಸಿದರು.

ಜನಪ್ರತಿನಿಧಿಗಳು ಭ್ರಷ್ಟಾಚಾರದ ಮೂಲ ಪ್ರೇರಕರಾಗಿದ್ದು, ಅಧಿಕಾರಿಗಳು ಜನಸೇವೆ ಮರೆತು ಇವರ ಕೈಗೊಂಬೆಗಳಾಗಿ ವರ್ತಿಸುತ್ತಿದ್ದಾರೆ. ಭ್ರಷ್ಟಾಚಾರ ನಿರ್ಮೂಲನೆ ಪ್ರತಿಯೊಬ್ಬ ಮತದಾರರ ಕರ್ತವ್ಯವಾಗಿದೆ. ಈ ನಿಟ್ಟಿನಲ್ಲಿ ಭ್ರಷ್ಟಾಚಾರದ ವಿರುದ್ಧ ಸಂಘಟಿತ ಹೋರಾಟ ನಡೆಸಬೇಕು ಎಂದು ಕರೆ ನೀಡಿದರು.

ಶೇಷಾದ್ರಿಪುರಂ ಎಜುಕೇಷನ್ ಟ್ರಸ್ಟ್‌ನ ಪ್ರಧಾನ ಕಾರ್ಯದರ್ಶಿ ವೂಡೆ, ಪಿ. ಕೃಷ್ಣ ಮಾತನಾಡಿದರು.ಸಂಸ್ಥೆಯ ಅಧ್ಯಕ್ಷ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು.

ಇದೇ ಸಂದರ್ಭದಲ್ಲಿ ವೆಂಕಟಾಚಲ ಅವರನ್ನು ಸನ್ಮಾನಿಸಲಾಯಿತು. ವಾಣಿಜ್ಯ ಶಾಸ್ತ್ರದ ಉಪನ್ಯಾಸಕಿ ಲತಾ ವಿದ್ಯಾಲಯದ ವರದಿ ಮಂಡಿಸಿದರು.

ಸಂಸ್ಥೆಯ ಟ್ರಸ್ಟಿ ಸರೋಜ ನಂಜಪ್ಪ, ಜಂಟಿ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಕಟ್ಟಡ ಸಮಿತಿ ಅಧ್ಯಕ್ಷ ಡಬ್ಲ್ಯು. ಜಿ. ರಾಮಕೃಷ್ಣ, ಟ್ರಸ್ಟಿಗಳಾದ ಕೃಷ್ಣಸ್ವಾಮಿ, ಎಂ. ಗೋಪಾಲ್ ಉಪಸ್ಥಿತರಿದ್ದರು. ಪ್ರಾಂಶುಪಾಲ ಡಾ. ಎಂ. ಪ್ರಕಾಶ್ ಸ್ವಾಗತಿಸಿದರು. ಸಿಬ್ಬಂದಿ ಕಾರ್ಯದರ್ಶಿ ಜಿ.ಬಿ. ಜನಾರ್ದನ್ ವಂದಿಸಿದರು.

ಕರ್ನಾಟಕ



11-7-2006

ಸಂಯುಕ್ತ ಕರ್ನಾಟಕ

ನೇರ ಮಾತು

# ಉಡುಪು ಕೆರಳಿಸುವಂತಿರಬಾರದು: ಕೃಷ್ಣ

ಕಾಲೇಜ್ ವಿದ್ಯಾರ್ಥಿಗಳ ಉಡುಪು ಸಂಹಿತೆ ಬಗ್ಗೆ ಶಿಕ್ಷಣ ತಜ್ಞ, ಚಿಂತಕ, ಡಬ್ಲ್ಯು.ಪಿ. ಕೃಷ್ಣ ಮಾತನಾಡಿದ್ದಾರೆ. ಅವರು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ.



ಡ್ರೆಸ್ ಕೋಡ್ ಬಗ್ಗೆ ಏನು ಹೇಳುತ್ತೀರಿ? ಕೋ-ಎಜುಕೇಷನ್ ಬಗ್ಗೆ ನಿಮ್ಮ ಅಭಿಪ್ರಾಯ ಏನು?

ಹುಡುಗ ಆಗಲಿ, ಹುಡುಗಿ ಆಗಲಿ ಸರಿಯಾದ ಡ್ರೆಸ್ ಹಾಕಿಕೊಂಡೇ ಬರಬೇಕು. ಪ್ರವೋಕೆಟ್ ಮಾಡೋ ರೀತಿ ನಿಷಿದ್ಧ. ಈ ಬಗ್ಗೆ ಕಾಲೇಜಿನ ಮ್ಯಾನೇಜ್‌ಮೆಂಟ್ ಜವಾಬ್ದಾರಿಯಿಂದ ವರ್ತಿಸಿ, ತಿಳಿಯ ಹೇಳಬೇಕು. ಅಪ್ಪ-ಅಮ್ಮಂದಿರ ರೆಸ್ಪಾನ್ಸಿಬಿಲಿಟೀಸ್ ಸಹ ಜಾಸ್ತಿ ಇದೆ. ಮಕ್ಕಳು ಕೆಡೋದೇ ಹಾಗೆ ಅನ್ನೋ ಅಭಿಪ್ರಾಯ ಇರೋದ್ರಿಂದ ಅದು ಮನೆಯಿಂದಲೇ ಕಣ್ಗಾವಲಿನಲ್ಲಿರಬೇಕು. ಇದು ಇಷ್ಟಕ್ಕೆ ಸಂಬಂಧಿಸಿದ್ದರಿಂದ ಹೇಳೋದು ಕಷ್ಟ.

ಇನ್ನು ಹೆಣ್ಣು-ಗಂಡಿಗೆ ಸಮಾನ ಅನ್ನೋ ರೀತಿ ಸಮಾಜ ಪ್ರತಿಬಿಂಬಿಸುತ್ತಿದೆ. ಗಂಡಿಗೆ ಸರಿಸಮಾನವಾಗಿ ಹೆಣ್ಣು ಓದುತ್ತಿದ್ದಾಳೆ. ಕೆಲಸಕ್ಕೆ ಸ್ಪರ್ಧಿಯಾಗುತ್ತಿದ್ದಾಳೆ. ಒಟ್ಟಿಗೆ ಕಲಿತು, ಒಟ್ಟಿಗೆ ದುಡಿಯುವುದರಿಂದ ಅದು ತಪ್ಪೇನೂ ಅಲ್ಲ. ಕೋ-ಎಜುಕೇಷನ್ ಒಂದು ರೀತಿ ಸ್ನೇಹಭಾವವನ್ನು ಬೆಳೆಸುತ್ತದೆ. ಅವರಿಗಿಂತ ನಾವು, ನಮಗಿಂತ ಅವರು ಚೆನ್ನಾಗಿ ಓದುತ್ತಾರೆ. ನಾವೂ ಓದಬೇಕು ಎನ್ನೋ ಭಾವನೆ ಬೆಳೆಯುವ ಅವಕಾಶ ಹೆಚ್ಚಿರುವುದರಿಂದ ಇದು ತಪ್ಪೇನೂ ಅಲ್ಲ.

ಇನ್ನು ನೀವು ಆನರರಿ ಜನರಲ್ ಸೆಕ್ರೆಟರಿ ಆಗಿರುವ ಶೇಷಾದ್ರಿಪುರಂ ಗ್ರೂಪ್ ಆಫ್ ಇನ್‌ಸ್ಟಿಟ್ಯೂಷನ್ಸ್ ಹೇಗಿದೆ? ವಿದ್ಯಾರ್ಥಿಗಳಿಗಾಗಿ ತಾವು ಹೇಗೆ ದುಡಿಯುತ್ತಿದ್ದೀರಿ?

ನಾವು ಆ ನಿಟ್ಟಿನಲ್ಲಿ ಹಲವಾರು ಉಪಯುಕ್ತ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೇವೆ.

ನಮ್ಮಲ್ಲಿ 'ಲೆಟ್‌ಆಫ್' ಅನ್ನೋದು ಇಲ್ಲವೇ ಇಲ್ಲ. ಹಾಗೆ ನೋಡಿಕೊಳ್ತೀವಿ. ಜೊತೆಗೆ 'ಮೆಂಟರ್ ಸಿಸ್ಟಮ್'ನ ಇಂಟರ್‌ಡ್ಯೂಸ್ ಮಾಡಿದೀವಿ. ಅಂದ್ರೆ ಇಪ್ಪತ್ತು ವಿದ್ಯಾರ್ಥಿಗಳ ಜವಾಬ್ದಾರಿಯನ್ನು ಒಬ್ಬ ಉಪನ್ಯಾಸಕರಿಗೆ ಒಪ್ಪಿಸ್ತೀವಿ. ಅವರು ವಿದ್ಯಾರ್ಥಿಯ ಫ್ರೆಂಡ್, ಫಿಲಾಸಫರ್, ಗೈಡ್ ಎಲ್ಲಾ ಆಗಿರ್ತಾರೆ. ವಿದ್ಯಾರ್ಥಿಗಳ ಓದು, ಅವನ ಅಭಿರುಚಿ, ಅವನ ಬೆಳವಣಿಗೆ ಎಲ್ಲ ಅವರೇ ಗಮನಿಸಿ, ಅವರ ಮನೆಗೆ ರಿಪೋರ್ಟ್ ಮಾಡೋ ಪದ್ಧತಿ ಇದೆ. ಹೀಗಾಗೋದರಿಂದ ಸ್ಟೂಡೆಂಟ್ ಓದು ಅನ್ನೋ ಕರ್ತವ್ಯದಿಂದ ವಿಮುಖನಾಗಲು ಸಾಧ್ಯವೇ ಇಲ್ಲ.

ಪ್ರತಿ ಮೂರು ತಿಂಗಳಿಗೊಮ್ಮೆ ಪೇರೆಂಟ್, ಟೀಚರ್ ನಡುವೆ ಸೌಹಾರ್ದಯುತವಾಗಿ ವಿಚಾರ ವಿನಿಮಯ ನಡೆಯುತ್ತದೆ.

ಟೆಸ್ಟ್, ಅಸೈನ್‌ಮೆಂಟ್ ಅಂತ ಆಯಾ ಉಪನ್ಯಾಸಕರೇ ಮಾಡಿದರೂ, ಇವರು ಕೊಟ್ಟ ಅಂಕವನ್ನು ಕೂಡಿ, ಸಹಿ ಹಾಕಿ ಕೊಡುವವರು ಪೇರೆಂಟ್ಸ್. ಹಾಗಾಗಿ ವಿದ್ಯಾರ್ಥಿಗಳೂ ಹಿರಿಯರ ಕಣ್ಗಾವಲಿನಲ್ಲೇ ಬೆಳೆಯಬೇಕಾಗುತ್ತದೆ.

ಮಕ್ಕಳ ಸರ್ವಾಂಗೀಣ ಬೆಳವಣಿಗೆಗೂ ನಮ್ಮ ಮೊದಲ ಆದ್ಯತೆ ಇದೆ. 'ಕೋ ಕರಿಕ್ಯುಲರ್ ಮತ್ತು ಎಕ್ಸ್‌ಟ್ರಾ ಕರಿಕ್ಯುಲರ್'ನತ್ತ ಸಹ ನಮ್ಮ ಗಮನಹರಿಸುತ್ತೇವೆ, ಹರಿಸುತ್ತಿದ್ದೇವೆ. ಜೊತೆಗೆ ತಂದೆ-ತಾಯಿಗಳಿಗೆ ಓರಿಯಂಟೇಷನ್ ಪ್ರೋಗ್ರಾಂ ಅಂತ ಹಮ್ಮಿಕೊಳ್ತೇವೆ.

ಅವರ ಜವಾಬ್ದಾರಿ ಕುರಿತು ತಿಳುವಳಿಕೆ ಮೂಡಿಸುತ್ತ ಕಾಲೇಜಿನ ಸಹಕಾರ ವ್ಯಾಪ್ತಿಯ ಬಗ್ಗೆ ಅರಿವು ಮೂಡಿಸುತ್ತೇವೆ.

ಒಟ್ಟಿನಲ್ಲಿ ಆ ನಿಟ್ಟಿನಲ್ಲಿ ನಾವು ಗೆದ್ದಿದ್ದೇವೆ.

ಹಿರಿಯೂರು ರಾಘವೇಂದ್ರ

ಪ್ರಜಾವಾಣಿ
ಗುರುವಾರ 15ನೇ ಜೂನ್ 2006

ಪ್ರಜಾವಾಣಿ ಚಿತ್ರ



ರಕ್ತದ ಗುಂಪುಗಳನ್ನು ಕಂಡುಹಿಡಿದ ಡಾ. ಕಾರ್ಲ್ ಲ್ಯಾಂಡ್ ಸ್ಟೆನಿಯರ್ ಜನ್ಮದಿನದ ಅಂಗವಾಗಿ 'ವಿಶ್ವ ರಕ್ತದಾನಿಗಳ ದಿನಾಚರಣೆ'ಯನ್ನು ಬೆಂಗಳೂರಿನಲ್ಲಿ ಇಂಡಿಯನ್ ರೆಡ್‌ಕ್ರಾಸ್ ಸಂಸ್ಥೆ ಬುಧವಾರ ಏರ್ಪಡಿಸಿತ್ತು. ಈ ಸಂದರ್ಭದಲ್ಲಿ (ಎಡದಿಂದ) ಸಂಸ್ಥೆಯ ಖಜಾಂಚಿ ಸರೋಜಾ ಕೆ.ಎಂ. ನಂಜಪ್ಪ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಯುಕ್ತ ಬಸವರಾಜು, ಸಂಸ್ಥೆಯ ಉಪಾಧ್ಯಕ್ಷ ಡಾ. ಎಸ್. ಚಂದ್ರಶೇಖರ ಶೆಟ್ಟಿ ಹಾಗೂ ಸದಸ್ಯೆ ಮಧುರಾ ಅಶೋಕ್‌ಕುಮಾರ್ ಉಪಸ್ಥಿತರಿದ್ದರು.

# ರಕ್ತದಾನ ಎಂದರೆ ಜೀವದಾನ: ಬಸವರಾಜ್

ಪ್ರಜಾವಾಣಿ ವಾರ್ತೆ

ಬೆಂಗಳೂರು: ರಕ್ತ ಎಂದರೆ ಜೀವ. ವಯಸ್ಸಾದ ನಂತರ ಯಾರಿಗೂ ಸಹಾಯ ಮಾಡಲಿಲ್ಲ ಎಂದು ಕೊರಗುವ ಬದಲು ವಯಸ್ಸಿರುವಾಗ, ಆರೋಗ್ಯ ಇರುವಾಗ ಉತ್ತಮವಾದ ಕೆಲಸ ಮಾಡುವ ಅವಕಾಶವನ್ನು ರಕ್ತ ನೀಡುವ ಮೂಲಕ ಬಳಸಿಕೊಳ್ಳಬೇಕು ಎಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತ ಬಸವರಾಜು ಬುಧವಾರ ತಿಳಿಸಿದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ (ಐಆರ್‌ಸಿಎಸ್) ಮತ್ತು ರಾಜೀವ್ ಗಾಂಧಿ ಆರೋಗ್ಯ ವಿಶ್ವವಿದ್ಯಾಲಯದ ಎನ್‌ಎಸ್‌ಎಸ್ ಘಟಕ ಜಂಟಿಯಾಗಿ ಆಯೋಜಿಸಿದ್ದ ವಿಶ್ವ ರಕ್ತದಾನಿಗಳ ದಿನ-2006ದ ಕಾರ್ಯಕ್ರಮದಲ್ಲಿ ಭಾಗವಹಿಸಿ ಅವರು ಮಾತನಾಡಿದರು.

'ರಕ್ತದಾನ ಕುರಿತ ಜಾಗೃತಿ ಎಲ್ಲೆಡೆ ಆಗಬೇಕು. ತಮಿಳುನಾಡು, ಆಂಧ್ರಪ್ರದೇಶಗಳಲ್ಲಿ ಇರುವಂತೆ ಜಿಲ್ಲಾ ರಕ್ತನಿಧಿ ಘಟಕಗಳನ್ನು ಕರ್ನಾಟಕದಲ್ಲೂ ಸ್ಥಾಪಿಸುವ ನಿಟ್ಟಿನಲ್ಲಿ ಸರ್ಕಾರ ಚಿಂತಿಸಬೇಕು ಎಂದು ಕರ್ನಾಟಕ ಐಆರ್‌ಸಿಎಸ್‌ನ ಉಪಾಧ್ಯಕ್ಷ ಡಾ. ಎಸ್. ಚಂದ್ರಶೇಖರ್ ಶೆಟ್ಟಿ ಹೇಳಿದರು.

'ಯಾವುದೇ ಜಾತಿ, ಧರ್ಮ, ರಾಷ್ಟ್ರ ಭಿನ್ನತೆ ಇಲ್ಲದೆ ರಕ್ತದಾನವನ್ನು ಮಾಡುವುದರಿಂದ ಇದೊಂದು ಮಾನವೀಯತೆ ಬೆಳೆಸಿಕೊಳ್ಳುವುದಕ್ಕಾಗಿ ದೇವರು ನೀಡಿರುವ ಅಪೂರ್ವ ಕಾಣಿಕೆ ಎಂದು ಕರ್ನಾಟಕ ಐಆರ್‌ಸಿಎಸ್ ಕಾರ್ಯಕಾರಿ ಸಮಿತಿ ಸದಸ್ಯ ಡಬ್ಲ್ಯು.ಪಿ.ಕೃಷ್ಣ ಹೇಳಿದರು.

ಎಬಿಒ ರಕ್ತ ಗುಂಪುಗಳನ್ನು ಆವಿಷ್ಕರಿಸಿದ ವಿಜ್ಞಾನಿ ಡಾ. ಕಾರಿ ಲ್ಯಾಂಡ್ ಸ್ಟೈನರ್ ಅವರ ಹುಟ್ಟು ಹಬ್ಬದ ದಿನವಾದ ಜೂನ್ 14ರಂದು ವಿಶ್ವದಾದ್ಯಂತ 'ವಿಶ್ವ ರಕ್ತದಾನಿಗಳ ದಿನ'ವನ್ನು ಆಚರಿಸಲಾಗುತ್ತದೆ ಎಂದು ಕರ್ನಾಟಕ ಐಆರ್‌ಸಿಎಸ್ ಮೇಲ್ವಿಚಾರಣಾ ಸಮಿತಿ ಸದಸ್ಯೆ ಮಧುರಾ ಅಶೋಕ್ ಕುಮಾರ್ ಹೇಳಿದರು.

ಸಮಾರಂಭದಲ್ಲಿ ಕರ್ನಾಟಕ ಐಆರ್‌ಸಿಎಸ್ ಖಜಾಂಚಿ ಸರೋಜ ಕೆ. ಎಂ.ನಂಜಪ್ಪ, ಪ್ರಧಾನ ಕಾರ್ಯದರ್ಶಿ ಡಾ.ಎನ್.ಜಿ.ನಾರಾಯಣ ಮತ್ತು ರಾಜೀವ್‌ಗಾಂಧಿ ಆರೋಗ್ಯ ವಿವಿಯ ಎನ್‌ಎಸ್‌ಎಸ್ ಘಟಕದ. ಸಂಚಾಲಕ ವಸಂತ ಶೆಟ್ಟಿ ಭಾಗವಹಿಸಿದ್ದರು.



# ಭಾರತ ಸೇವಾದಲ



ಕೇಂದ್ರ ಸಮಿತಿ, ಕುಮಾರ ಕೃಪ ರಸ್ತೆ,
ಬೆಂಗಳೂರು

## ಭಾರತ ಸೇವಾದಲ ಡಾ|| ಎಂ.ಸಿ. ಮೋದಿ ಶಿಕ್ಷಕರ ತರಬೇತಿ ಕೇಂದ್ರದ ವಿಸ್ತರಣಾ ಕಟ್ಟಡ ಉದ್ಘಾಟನೆ ಕಾರ್ಯಕ್ರಮ

ದಿನಾಂಕ : 10-06-2006 ನೇ ಶನಿವಾರ　　ಸಮಯ : ಬೆಳಗ್ಗೆ 11.00

ಸ್ಥಳ : ಡಾ|| ಎಂ.ಸಿ. ಮೋದಿ ಶಿಕ್ಷಕರ ತರಬೇತಿ ಕೇಂದ್ರ, ರಾಮಕೃಷ್ಣ ಹೆಗಡೆ ನಗರ, ಥಣಿಸಂದ್ರ, ಬೆಂಗಳೂರು.

**ವಿಸ್ತರಣಾ ಕಟ್ಟಡ ಉದ್ಘಾಟನೆ**
ಶ್ರೀ ಬಿ.ಕೆ. ಹರಿಪ್ರಸಾದ್
ಗೌರವಾನ್ವಿತ ರಾಜ್ಯಸಭಾ ಸದಸ್ಯರು ಮತ್ತು
ಪ್ರಧಾನ ಕಾರ್ಯದರ್ಶಿಗಳು
ಅಖಿಲ ಭಾರತ ಕಾಂಗ್ರೆಸ್ ಸಮಿತಿ, ನವದೆಹಲಿ

**ದೀಪ ಬೆಳಗಿಸುವುದು**
ಶ್ರೀ ವಿ.ಆರ್. ಸುದರ್ಶನ್
ಗೌರವಾನ್ವಿತ ಸಭಾಪತಿಗಳು
ಕರ್ನಾಟಕ ವಿಧಾನ ಪರಿಷತ್, ಬೆಂಗಳೂರು

### ಮುಖ್ಯ ಅತಿಥಿಗಳು

ಶ್ರೀ ಸಿ.ಕೆ. ಜಾಫರ್ ಷರೀಫ್
ಮಾಜಿ ಕೇಂದ್ರ ಸಚಿವರು
ಮಾಜಿ ಅಧ್ಯಕ್ಷರು, ಭಾರತ ಸೇವಾದಲ

ಶ್ರೀ ಎ. ಕೃಷ್ಣಪ್ಪ
ವಿಧಾನ ಸಭಾ ಸದಸ್ಯರು
ವರ್ತೂರು ಕ್ಷೇತ್ರ

ಶ್ರೀ ಎಸ್.ಟಿ. ಸೋಮಶೇಖರ್
ಅಧ್ಯಕ್ಷರು, ಬೆಂಗಳೂರು ನಗರ ಜಿಲ್ಲಾ ಸಮಿತಿ
ಭಾರತ ಸೇವಾದಲ

**ಅಧ್ಯಕ್ಷತೆ**
ಶ್ರೀ ಹೆಚ್.ಎಂ. ಗುರುಸಿದ್ದಸ್ವಾಮಿ
ಅಧ್ಯಕ್ಷರು, ಭಾರತ ಸೇವಾದಲ

**ಪ್ರಾಸ್ತಾವಿಕ ಭಾಷಣ**
ಶ್ರೀ ಯು.ಆರ್. ಸಭಾಪತಿ
ಪ್ರಧಾನ ಕಾರ್ಯದರ್ಶಿ, ಭಾರತ ಸೇವಾದಲ

### ಉಪಸ್ಥಿತ ಗಣ್ಯರು

ಶ್ರೀ ಡಬ್ಲ್ಯೂ.ಡಿ. ಕೃಷ್ಣ
ಉಪಾಧ್ಯಕ್ಷರು, ಭಾರತ ಸೇವಾದಲ

ಶ್ರೀ ಹೆಚ್.ಹೆಚ್. ದೇವರಾಜ್
ಸಂಘಟನಾ ಕಾರ್ಯದರ್ಶಿ,
ಭಾರತ ಸೇವಾದಲ

ಶ್ರೀ ಪಿ.ಎಸ್.ಎನ್. ರಾಜು
ಅಖಿಲ ಭಾರತ ಸಂಚಾಲಕರು
ಭಾರತ ಸೇವಾದಲ

## ಸರ್ವರಿಗೂ ಸುಸ್ವಾಗತ

ಅಧ್ಯಕ್ಷರು, ಪದಾಧಿಕಾರಿಗಳು ಮತ್ತು ಕೇಂದ್ರ ಕಾರ್ಯಕಾರಿ ಸಮಿತಿ ಸದಸ್ಯರು
**ಭಾರತ ಸೇವಾದಲ**

ಶುಕ್ರವಾರ 9 ಜೂನ್ 2006

ಸಂಜೆವಾಣಿ



## ಭಾರತ ಸೇವಾದಲ

ಕೇಂದ್ರ ಸಮಿತಿ, ಕುಮಾರ ಕೃಪ ರಸ್ತೆ, ಬೆಂಗಳೂರು

# ಭಾರತ ಸೇವಾದಲ ಡಾ:ಎಂ.ಸಿ.ಮೋದಿ ಶಿಕ್ಷಕರ ತರಬೇತಿ ಕೇಂದ್ರದ ವಿಸ್ತರಣಾ ಕಟ್ಟಡ ಉದ್ಘಾಟನೆ ಕಾರ್ಯಕ್ರಮ

**ದಿನಾಂಕ: 10.06.2006 ನೇ ಶನಿವಾರ ಸಮಯ: ಬೆಳಿಗ್ಗೆ 11.00**

ಸ್ಥಳ: ಡಾ. ಎಂ.ಸಿ. ಮೋದಿ ಶಿಕ್ಷಕರ ತರಬೇತಿ ಕೇಂದ್ರ,
ರಾಮಕೃಷ್ಣ ಹೆಗಡೆ ನಗರ, ಥಣಿಸಂದ್ರ, ಬೆಂಗಳೂರು.

ವಿಸ್ತರಣಾ ಕಟ್ಟಡ ಉದ್ಘಾಟನೆ

**ಶ್ರೀ ಬಿ.ಕೆ. ಹರಿಪ್ರಸಾದ್**
ಗೌರವಾನ್ವಿತ ರಾಜ್ಯಸಭಾ ಸದಸ್ಯರು ಮತ್ತು
ಪ್ರಧಾನ ಕಾರ್ಯದರ್ಶಿಗಳು ಅಖಿಲ ಭಾರತ
ಕಾಂಗ್ರೆಸ್ ಸಮಿತಿ, ನವದೆಹಲಿ

ದೀಪ ಬೆಳಗಿಸುವುದು

**ಶ್ರೀ ವಿ.ಆರ್. ಸುದರ್ಶನ್**
ಗೌರವಾನ್ವಿತ ಸಭಾಪತಿಗಳು
ಕರ್ನಾಟಕ ವಿಧಾನ ಪರಿಷತ್
ಬೆಂಗಳೂರು

ಮುಖ್ಯ ಅತಿಥಿಗಳು

**ಶ್ರೀ ಸಿ.ಕೆ. ಜಾಫರ್‌ಷರೀಫ್**
ಮಾಜಿ ಕೇಂದ್ರ ಸಚಿವರು
ಮಾಜಿ ಅಧ್ಯಕ್ಷರು, ಭಾರತ ಸೇವಾದಲ.

**ಶ್ರೀ ಎ. ಕೃಷ್ಣಪ್ಪ**
ವಿಧಾನಸಭಾ ಸದಸ್ಯರು
ವರ್ತೂರು ಕ್ಷೇತ್ರ.

**ಶ್ರೀ ಎಸ್.ಟಿ. ಸೋಮಶೇಖರ್**
ಅಧ್ಯಕ್ಷರು, ಬೆಂಗಳೂರು ನಗರ ಜಿಲ್ಲಾ ಸಮಿತಿ, ಭಾರತ ಸೇವಾದಲ.

ಅಧ್ಯಕ್ಷತೆ

**ಶ್ರೀ ಹೆಚ್.ಎಂ. ಗುರುಸಿದ್ಧಸ್ವಾಮಿ**
ಅಧ್ಯಕ್ಷರು, ಭಾರತ ಸೇವಾದಲ

ಪ್ರಾಸ್ತಾವಿಕ ಭಾಷಣ

**ಶ್ರೀ ಯು.ಆರ್. ಸಭಾಪತಿ**
ಪ್ರಧಾನ ಕಾರ್ಯದರ್ಶಿ, ಭಾರತ ಸೇವಾದಲ

ಉಪಸ್ಥಿತ ಗಣ್ಯರು

**ಶ್ರೀ ಡಬ್ಲ್ಯೂ.ಪಿ.ಕೃಷ್ಣ**
ಕೋಶಾಧ್ಯಕ್ಷರು, ಭಾರತ ಸೇವಾದಲ

**ಶ್ರೀ ಹೆಚ್.ಹೆಚ್. ದೇವರಾಜ್**
ಸಂಘಟನಾ ಕಾರ್ಯದರ್ಶಿ, ಭಾರತ ಸೇವಾದಲ

**ಶ್ರೀ ಸಿ.ಎನ್.ಎನ್. ರಾಜು**
ಅಖಿಲ ಭಾರತ ಸಂಚಾಲಕರು, ಭಾರತ ಸೇವಾದಲ.

## ಸರ್ವರಿಗೂ ಸುಸ್ವಾಗತ

ಅಧ್ಯಕ್ಷರು, ಪದಾಧಿಕಾರಿಗಳು ಮತ್ತು
ಕೇಂದ್ರ ಕಾರ್ಯಕಾರಿ ಸಮಿತಿ ಸದಸ್ಯರು ಭಾರತ ಸೇವಾದಲ

25-5-2006

ರಾಜ್ಯಪ್ರಗತಿ

# ಶಿಕ್ಷಣ ಸೌರಭ ಪ್ರಶಸ್ತಿ ಪುರಸ್ಕೃತರು




ಇತ್ತೀಚೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ "ಶಿಕ್ಷಣ ಸೌರಭ" ಮಾಸ ಪತ್ರಿಕೆಯ ವಾರ್ಷಿಕೋತ್ಸವ ಸಮಾರಂಭದಲ್ಲಿ ಹಲವು ಶಿಕ್ಷಕರನ್ನು ಮತ್ತು ಶಿಕ್ಷಣ ತಜ್ಞರನ್ನು ಸನ್ಮಾನಿಸಲಾಯಿತು. ಶೇಷಾದ್ರಿಪುರ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ.ಕೃಷ್ಣ ಮತ್ತು ಧರ್ಮದರ್ಶಿ ಆರ್.ಕೃಷ್ಣ ಅವರನ್ನೂ ಗೌರವಿಸಲಾಯಿತು.

ಉಷಾ ಕಿರಣ

ಸೋಮವಾರ | ಮೇ 22 | 2006 | ಬೆಂಗಳೂರು

# ‘ಶಿಕ್ಷಕರ ಹಣ ಗಳಿಕೆ ಪ್ರವೃತ್ತಿ ಮಕ್ಕಳ ಮೇಲೆ ದುಷ್ಪರಿಣಾಮ’

ಶಿಕ್ಷಕರು ಅನ್ಯ ಮಾರ್ಗಗಳ ಮೂಲಕ ಹಣ ಗಳಿಕೆಗೆ ಮುಂದಾಗಿರುವುದು ಮಕ್ಕಳ ಮೇಲೆ ದುಷ್ಪರಿಣಾಮ ಉಂಟು ಮಾಡುವುದು ಎಂದು ಸಾಹಿತಿ ಡಾ.ದೊಡ್ಡರಂಗೇಗೌಡ ಕಳವಳ ವ್ಯಕ್ತಪಡಿಸಿದ್ದಾರೆ.

ಭಾನುವಾರ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಏರ್ಪಡಿಸಿದ್ದ ‘ಶಿಕ್ಷಣ ಸೌರಭ’ ಪತ್ರಿಕೆ ವಾರ್ಷಿಕೋತ್ಸವ, ‘ಗುರುಶ್ರೇಷ್ಠ’, ‘ಶಿಕ್ಷಣ ಸೇವಾ ರತ್ನ’ ಹಾಗೂ ಶಿಕ್ಷಣ ಚೇತನ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಪಾಲ್ಗೊಂಡು ಅವರು ಹೇಳಿದ್ದು:

ಶಿಕ್ಷಕನು ಮಕ್ಕಳನ್ನು ಉತ್ತಮ ದಾರಿಯಲ್ಲಿ ನಡೆಸುವ ಹೊಣೆ ಹೊತ್ತಿರುತ್ತಾನೆ. ಅವನೇ ದಾರಿ ತಪ್ಪಿದರೇ ಮಕ್ಕಳು ದಾರಿ ತಪ್ಪುತ್ತವೆ. ಬೇಗನೇ ಶ್ರೀಮಂತನಾಗಬೇಕು ಎಂಬ ಬಯಕೆಯಿಂದ ಶಿಕ್ಷಕರು ಮಕ್ಕಳ ಹಿತ ಬಲಿಕೊಟ್ಟು ವ್ಯಾಪಾರ ವ್ಯವಹಾರಕ್ಕೆ ಮುಂದಾಗುವುದು ವಿಷಾದನೀಯ ಸಂಗತಿ.

ಉತ್ತಮ ಶಿಕ್ಷಣ ನೀಡಿ ಮಕ್ಕಳನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಲು ಶಿಕ್ಷಕನಿಗೆ ಕೆಲವು ಅರ್ಹತೆಗಳು ಅಗತ್ಯ. ತನ್ನ ಹೆಚ್ಚಿನ ಸಮಯವನ್ನು



ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಏರ್ಪಡಿಸಿದ್ದ ‘ಶಿಕ್ಷಣ ಸೌರಭ’ ಪತ್ರಿಕೆ ವಾರ್ಷಿಕೋತ್ಸವ, ‘ಗುರುಶ್ರೇಷ್ಠ’, ‘ಶಿಕ್ಷಣ ಸೇವಾ ರತ್ನ’ ಹಾಗೂ ಶಿಕ್ಷಣ ಚೇತನ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಪ್ರಶಸ್ತಿ ವಿಜೇತ ಶಿಕ್ಷಕರೊಂದಿಗೆ ಮಾಧ್ಯಮ ಅಕಾಡೆಮಿ ಅಧ್ಯಕ್ಷ ಎ. ಎನ್. ಸುಬ್ಬರಾವ್, ಸಾಹಿತಿ ದೊಡ್ಡರಂಗೇಗೌಡ ಉಪಸ್ಥಿತರಿದ್ದರು.

ಜ್ಞಾನಾರ್ಜನೆಗೆ ಮೀಸಲಿಡಬೇಕು. ತನ್ನ ವ್ಯಕ್ತಿತ್ವ ವಿಕಸಿಸಿಕೊಂಡು ಮಕ್ಕಳಿಗೆ ಸ್ವತಃ ಮಾದರಿಯಾಗಬೇಕು. ಇತ್ತೀಚಿನ ವರ್ಷಗಳಲ್ಲಿ ಶಿಕ್ಷಣ ಮತ್ತು ಸಾಮಾಜಿಕ ಮೌಲ್ಯಗಳು ನಶಿಸಿ ಹೋಗುತ್ತಿವೆ. ಪ್ರಶಸ್ತಿ ಪುರಸ್ಕೃತ ಶಿಕ್ಷಕರಿಗೆ ಇಂತಹ ದೋಷಗಳನ್ನು ಸರಿಪಡಿಸಿಕೊಂಡು ಉತ್ತಮ ಶಿಕ್ಷಣ ನೀಡುವತ್ತ ಲಕ್ಷ್ಯ ಹರಿಸಬೇಕು ಎಂದರು.

ಸಣ್ಣ ಉಳಿತಾಯ ಮತ್ತು ತಂತ್ರಜ್ಞಾನ ಸಚಿವ ರಾಮಚಂದ್ರಗೌಡ ಮಾತನಾಡಿ, ಸಮಾಜಕ್ಕೆ ಉತ್ತಮ ಸೇವೆ ಸಲ್ಲಿಸಿದವರನ್ನು ಹಾಗೂ ತಮ್ಮನ್ನೇ ಸಮರ್ಪಿಸಿಕೊಂಡು ಕೆಲಸ ಮಾಡಿದವರನ್ನು ಗೌರವಿಸಬೇಕು. ಈ ಪದ್ಧತಿ ಇಂದು ನಿನ್ನೆಯದಲ್ಲ ರಾಜಮಹಾರಾಜರ ಕಾಲದಿಂದಲೂ ಕಲಾವಿದ, ಸಾಹಿತಿಗಳನ್ನು ಸನ್ಮಾನಿಸುವ ಸಂಪ್ರದಾಯ ಬೆಳೆದುಕೊಂಡು ಬಂದಿದೆ ಎಂದರು.

ಕೊಳದಮಠದ ಡಾ.ಶಾಂತವೀರ ಸ್ವಾಮೀಜಿ, ಕರ್ನಾಟಕ ಮಾಧ್ಯಮ ಅಕಾಡೆಮಿ ಅಧ್ಯಕ್ಷ ಎ.ಎನ್.ಸುಬ್ಬರಾವ್, ಪ್ರೌಢ ಶಿಕ್ಷಣ ಇಲಾಖೆ ನಿರ್ದೇಶಕ ಎಂ.ಚಂದ್ರಶೇಖರಯ್ಯ, ಟಿ.ಶಂಕರಪ್ಪ, ಪತ್ರಕರ್ತ ಜೆ.ಎಂ.ರಾಜಶೇಖರ್, ಕಲಾವಿದ ಸಾಯಿ ಪ್ರಕಾಶ್, ಶಿಕ್ಷಣ ಸೌರಭ ಸಂಪಾದಕಿ ನಾಗರತ್ನ ಸೇರಿದಂತೆ ಗಣ್ಯರು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

ಪ್ರಜಾವಾಣಿ ಸೋಮವಾರ 22ನೇ ಮೇ 2006

ಪ್ರಜಾವಾಣಿ ಚಿತ್ರ




ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಭಾನುವಾರ ನಡೆದ ಗುರುಶ್ರೇಷ್ಠ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಪ್ರಶಸ್ತಿ ಪುರಸ್ಕೃತ ಶಿಕ್ಷಕರೊಂದಿಗೆ ಕರ್ನಾಟಕ ಮಾಧ್ಯಮ ಅಕಾಡೆಮಿ ಅಧ್ಯಕ್ಷ ವಿ.ಎನ್.ಸುಬ್ಬರಾವ್, ಸಾಹಿತಿ ದೊಡ್ಡರಂಗೇಗೌಡ ಮುಂತಾದವರು ಇದ್ದಾರೆ.

# ಅಕ್ರಮ ಹಣಗಳಿಕೆ: ದೊಡ್ಡರಂಗೇಗೌಡ ವಿಷಾದ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಅನ್ಯಮಾರ್ಗಗಳ ಮೂಲಕ ಹಣ ಗಳಿಸುವ ಪ್ರವೃತ್ತಿ ಇಂದಿನ ಶಿಕ್ಷಕರಲ್ಲಿ ಹೆಚ್ಚಾಗುತ್ತಿದೆ. ಈ ಕಳವಳಕಾರಿ ಅಂಶ, ವಿದ್ಯಾರ್ಥಿಗಳ ಮೇಲೆ ದುಷ್ಪರಿಣಾಮ ಬೀರುತ್ತಿದೆ' ಎಂದು ಸಾಹಿತಿ ಡಾ.ದೊಡ್ಡರಂಗೇಗೌಡ ಭಾನುವಾರ ಅಭಿಪ್ರಾಯಪಟ್ಟರು.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ 'ಶಿಕ್ಷಣ ಸೌರಭ' ಮಾಸಪತ್ರಿಕೆಯ ಪ್ರಥಮ ವಾರ್ಷಿಕೋತ್ಸವ ಹಾಗೂ ಗುರುಶ್ರೇಷ್ಠ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

'ಶಿಕ್ಷಕರು ತಮ್ಮ ನಡೆ, ನುಡಿ ಮತ್ತು ಆದರ್ಶಮಯ ವ್ಯಕ್ತಿತ್ವದಿಂದ ವಿದ್ಯಾರ್ಥಿಗಳಿಗೆ ಮಾದರಿಯಾಗಬೇಕು. ಸ್ನೇಹಶೀಲರಾಗಿ ಮಕ್ಕಳ ಮನಸ್ಸನ್ನು ಗೆಲ್ಲಬೇಕು. ಶಿಕ್ಷಕರೇ ಹಾದಿ ತಪ್ಪಿದರೆ, ಅವರನ್ನು ಅನುಕರಣೆ ಮಾಡುವ ವಿದ್ಯಾರ್ಥಿಗಳ ಗತಿ ಏನು?' ಎಂದು ಅವರು ಪ್ರಶ್ನಿಸಿದರು.

ಜ್ಞಾನಾರ್ಜನೆಗೆ ಸಮಯ ಮೀಸಲಿಡಿ: 'ಸಮಯ ಎಂಬುದು ವಿದ್ಯಾರ್ಥಿಗಳಷ್ಟೇ, ಶಿಕ್ಷಕರಿಗೂ ಮುಖ್ಯ. ಬಿಡುವಿನ ವೇಳೆಯಲ್ಲಿ ಶಿಕ್ಷಕರೂ ಹೊಸ ಹೊಸ ವಿಷಯಗಳ ಬಗ್ಗೆ ತಿಳಿದುಕೊಳ್ಳಬೇಕು. ಜಗತ್ತಿನ ಎಲ್ಲ ಆಗು ಹೋಗುಗಳ ಬಗ್ಗೆಯೂ ಅವರಿಗೆ ಅರಿವಿರಬೇಕು. ಇದರಿಂದ ಶಿಕ್ಷಕರಿಗೆ ಮಾತ್ರ ಜ್ಞಾನಾರ್ಜನೆ ಆಗುವುದಿಲ್ಲ, ವಿದ್ಯಾರ್ಥಿಗಳಿಗೂ ಸಹಾಯ ಆಗುತ್ತದೆ' ಎಂದು ದೊಡ್ಡರಂಗೇ ಗೌಡ ಕಿವಿಮಾತು ಹೇಳಿದರು.

ಪ್ರೋತ್ಸಾಹ ಅಗತ್ಯ: 'ಶಿಕ್ಷಣವನ್ನು ಸೇವೆ ಎಂದು ಪರಿಗಣಿಸಿ ನಿಷ್ಠೆಯಿಂದ ದುಡಿಯುತ್ತಿರುವ ನೂರಾರು ಶಿಕ್ಷಕರು ನಮ್ಮ ನಡುವೆ ಇದ್ದಾರೆ. ಇಂಥವರನ್ನು ಗುರುತಿಸಿ ಪ್ರೋತ್ಸಾಹಿಸಬೇಕಾದ ಅಗತ್ಯವಿದೆ' ಎಂದು ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವ ರಾಮಚಂದ್ರಗೌಡ ತಿಳಿಸಿದರು.

'ಈ ರೀತಿ ಪ್ರೋತ್ಸಾಹ ಮತ್ತು ಪ್ರಶಸ್ತಿ ನೀಡುವುದರಿಂದ ಇತರೆ ಶಿಕ್ಷಕರ ಮೇಲೂ ಇದು ಪ್ರಭಾವ ಬೀರುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ, ಮಕ್ಕಳಿಗೆ ವಿದ್ಯೆ ಕಲಿಸುವ ಪುಣ್ಯದ ಕೆಲಸಕ್ಕೆ- ಅಪಚಾರ ಆಗದಂತೆ ವರ್ತಿಸುವ ಹೊಣೆಯೂ ಶಿಕ್ಷಕರ ಮೇಲಿದೆ' ಎಂದು ಅವರು ಎಚ್ಚರಿಸಿದರು.

'ಗುರುಶ್ರೇಷ್ಠ' ಪ್ರಶಸ್ತಿ ಪ್ರದಾನ: ಶಿಕ್ಷಣ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಶಿಕ್ಷಕರಿಗೆ ಮತ್ತು ಶಿಕ್ಷಣ ಸಂಸ್ಥೆಗಳಿಗೆ ಡಾ.ಎಚ್.ನರಸಿಂಹಯ್ಯ ಸ್ಮರಣಾರ್ಥ ಪ್ರಶಸ್ತಿಗಳನ್ನು ನೀಡಲಾಯಿತು.

ರಾಜ್ಯದ ವಿವಿಧ ಭಾಗಗಳ ಸುಮಾರು 50 ಶಿಕ್ಷಕರಿಗೆ 'ಗುರುಶ್ರೇಷ್ಠ' ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು. ಎಂಟು ಮಂದಿಗೆ 'ಶಿಕ್ಷಣ ಸೇವಾರತ್ನ' ಪ್ರಶಸ್ತಿಯನ್ನು ಪ್ರದಾನ ಮಾಡಲಾಯಿತು. ಜತೆಗೆ 10 ವಿದ್ಯಾ ಸಂಸ್ಥೆಗಳಿಗೆ 'ಶಿಕ್ಷಣ ಚೇತನ' ಪ್ರಶಸ್ತಿಯನ್ನು ನೀಡಲಾಯಿತು.

ಸಮಾರಂಭದಲ್ಲಿ ಕೋಳದ ಮಠದ ಡಾ.ಶಾಂತವೀರ ಸ್ವಾಮೀಜಿ, ಕರ್ನಾಟಕ ಮಾಧ್ಯಮ ಅಕಾಡೆಮಿ ಅಧ್ಯಕ್ಷ ವಿ.ಎನ್.ಸುಬ್ಬರಾವ್, ಪ್ರೌಢ ಶಿಕ್ಷಣ ಇಲಾಖೆಯ ನಿರ್ದೇಶಕ ಎಂ.ಚಂದ್ರಶೇಖರಯ್ಯ, 'ಶಿಕ್ಷಣ ಸೌರಭ' ಮಾಸ ಪತ್ರಿಕೆಯ ಸಂಪಾದಕಿ ನಾಗರತ್ನ ಸೇರಿದಂತೆ ಹಲವಾರು ಶಿಕ್ಷಕರು ಭಾಗವಹಿಸಿದ್ದರು.

# ಎಸ್.ಎಸ್.ಎಲ್.ಸಿ. ಮುಗಿಯಿತು, ಮುಂದೇನು?

ಹಿರಿಯೂರು ರಾಘವೇಂದ್ರ

ವಿದ್ಯಾರ್ಥಿ ಬದುಕಿನ ಪರ್ವ ಕಾಲ ಮನ್ವಂತರದ ಸಮಯ ಹತ್ತಿರವಾಗಿದೆ. ಪ್ರೌಢ ಶಾಲೆಯ ಪ್ರೌಢಾವಸ್ಥೆ ಮುಗಿಸಿ ಪಿಯುಸಿ ಎಂಬ ಹೊಸ ಬದುಕಿನತ್ತ, ಸ್ಥಿರ ಬೌದ್ಧಿಕಾವಸ್ಥೆಯತ್ತ ಕಾಲಿಡುತ್ತಿರುವ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಮುಂದೇನು, ಮುಂದೆ ಹೇಗೆ ಎನ್ನುವ ಭವಿಷ್ಯದ ಅನೇಕ ಪ್ರಶ್ನೆಗಳಿಗೆ ಉತ್ತರ ಬೇಕಾಗಿತ್ತು.

ಅದನ್ನರ್ಥ ಮಾಡಿಕೊಂಡು ಸಂಪರ್ಕಿಸಿದ್ದು ತಂತ್ರಜ್ಞ, ಖ್ಯಾತ ಶಿಕ್ಷಣ ತಜ್ಞ, ಸಾಮಾಜಿಕ ಕಾರ್ಯಕರ್ತ ವೂಡೇ ಪಿ. ಕೃಷ್ಣ ಅವರನ್ನು. ಅವರ ಉತ್ತರ ವಿದ್ಯಾರ್ಥಿ ಬದುಕಿನ ಅನೇಕ ಮುಖಗಳನ್ನು ಪರಿಚಯಿಸಬಲ್ಲದು. ಅವರೆಲ್ಲರ ಬಹಳಷ್ಟು ಪ್ರಶ್ನೆಗಳಿಗೆ ಉತ್ತರ ನೀಡಬಲ್ಲದು.

ಶಾಲಾ ದಿನಗಳನ್ನು ಮುಗಿಸಿ ಪ್ರಮುಖ ಹಂತವೊಂದರ ಹೊಸ್ತಿಲಿಗೆ ಕಾಲಿಡುತ್ತಿರುವ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಮುಂದಿನ ವಿದ್ಯೆಗೆ ಹೇಗೆ ಸಿದ್ಧರಾಗಬೇಕು.

ಶಾಲೆಯ ಶಿಸ್ತಿನ ವಾತಾವರಣದಿಂದ ಕೊಂಚ ಸಡಿಲಿಕೆಯ ವಾತಾವರಣದತ್ತ. ಕಾಲಿಡುತ್ತಿರುವ ಈ ಶಿಕ್ಷಣಾರ್ಥಿಗಳು ಬಹಳ ಎಚ್ಚರಿಕೆಯಿಂದಲೇ ಇರಬೇಕು. ಇಲ್ಲಿ ಸ್ಪೂನ್ ಫೀಡಿಂಗ್ ಇರೋದಿಲ್ಲ, ಬೋರ್ಡ್ ವರ್ಕ್ ಬಹಳ ಕಡಿಮೆ. ಇಲ್ಲಿ ಲೆಕ್ಚರಿಂಗ್ ಪದ್ಧತಿ ಇರುತ್ತದೆಂಬುದು ಮುಖ್ಯ.

ಬಹಳಷ್ಟು ವಿದ್ಯಾರ್ಥಿ, ವಿದ್ಯಾರ್ಥಿನಿಯರು ಪಿಯುಸಿಯನ್ನು ಬೇಸಿಗೆ ರಜದ ಮುಂದುವರಿದ ಭಾಗ ಅಂತ ಭಾವಿಸಿಬಿಡ್ತಾರೆ. ಅದು ತುಂಬಾ ತಪ್ಪು. ಅವರೆಲ್ಲರ ಬದುಕಿನ ಟರ್ನಿಂಗ್ ಪಾಯಿಂಟ್ ಇದು. ಅಡಾಲಸೆಂಟ್ ಏಜ್ ಅಂತ ನಾವೇನು ಗುರ್ತಿಸುತ್ತೀವಿ ಅದು ಬಹುಶಃ ಈ ಎರಡು ವರ್ಷ ಅವರಲ್ಲಿ ಗೆದ್ದರೋ ಅವರನ್ನ ಗೆಲುವು ಹಿಂಬಾಲಿಸುತ್ತೆ. ಖಂಡಿತ!

ಈ ಘಟ್ಟದಲ್ಲಿ ಅವರು ಯಾವ ವಿಷಯಗಳನ್ನು ಆರಿಸಿಕೊಂಡರೆ ಚೆನ್ನ.

ಶಾಲಾ ಬದುಕನ್ನು ಮುಗಿಸಿ ಬಂದಿರುವ ಮಕ್ಕಳಿಗೆ ಒಂದು ಖಚಿತವಾದ ನಿರ್ಣಯ ತೆಗೆದುಕೊಳ್ಳುವ ಶಕ್ತಿ ಇನ್ನೂ ಬಂದಿರೋದಿಲ್ಲ, ಅದನ್ನು ತುಂಬುವ ಪ್ರಯತ್ನ ಇಲ್ಲಿ ನಡೆಯಬೇಕು.

ಇಲ್ಲೇನಾಗಿದೆ ಎಂದರೆ ಸಾಮಾನ್ಯವಾಗಿ ಎಲ್ಲ ತಂದೆ-ತಾಯಿಗಳಿಗೂ ಒಂದು ತಪ್ಪು ಕಲ್ಪನೆ ಇದೆ. ತಪ್ಪು ಗ್ರಹಿಕೆ ಇದೆ. ನಮ್ಮ ಹುಡುಗನಿಗೆ ಶತಾಯಗಯಾಯ ವಿಜ್ಞಾನ ಅಂದರೆ ಸೈನ್ಸ್ ಕಲಿಯಲು ಕಲಿಸಿ ಬಿಡಬೇಕು ಅಂತ. ಅಂದರೆ ಎಲ್ಲರ ದೃಷ್ಟಿಯಲ್ಲಿ ಸೈನ್ಸ್‌ಗೇ ಹೆಚ್ಚಿನ ಆದ್ಯತೆ ಪ್ರಾಮುಖ್ಯತೆ! ನನ್ ಮಗ ಸೈನ್ಸ್‌ಗೆ ಸೇರಿ ಬಿಟ್ಟರೆ ಇಂಜಿನಿಯರ್ ಆಗ್ತಾನೆ, ಡಾಕ್ಟರ್ ಆಗ್ತಾನೇ ಅಂತ. ಅವರೆಲ್ಲರ ದೃಷ್ಟೀಲಿ ಆರ್ಟ್ಸೋ, ಕಾಮರ್ಸೋ ಅನ್ನೋದು ಕೆಲಸಕ್ಕೆ ಬಾರದ್ದು, ಎರಡು ಅಥವಾ ಮೂರನೇ ಸ್ಥಾನದಲ್ಲಿರುವಂಥಾದ್ದು.

ಅವರ ಮಕ್ಕಳ ಅನಿಸಿಕೆ, ಭಾವನೆ, ಗ್ರಹಿಕೆಗೆ ಬೆಲೆಯೇ ಇರುವುದಿಲ್ಲ, ಹಾಗಾಗಿ ಫೆಯಿಲ್ಯೂರ್ ಸಂಭವಿಸಿಬಿಡುತ್ತೆ. ವೃತ್ತಿ ಪ್ರವೃತ್ತಿ ಎರಡೂ ಒಂದಾದಾಗ ಭವಿಷ್ಯ ಉಜ್ವಲವಾಗಿರುತ್ತೆ, ಯಾವುದೇ ಮಗುವಿನ ಆಸಕ್ತಿ-ಪ್ರವೃತ್ತಿಯನ್ನ ಎಲ್ಲರಿಗಿಂತ ಹೆಚ್ಚು ಹತ್ತಿರದಿಂದ, ಮುತುವರ್ಜಿಯಿಂದ ಗಮನಿಸುವುದಕ್ಕೆ ಸಾಧ್ಯವಾಗುವುದು ಹೆತ್ತವರಿಗೆ. ಹಾಗಾಗಿ ಅವರೇ ಮಗುವಿನ ಭವಿಷ್ಯ ರೂಪಿಸುವ ರೂವಾರಿಗಳು. ಹೀಗಿರುವಾಗ ತಮ್ಮ ಮಗನ ಅಭಿರುಚಿ ಗುರುತಿಸಿ ಇವನಿಗೆ ಪಿಯುಸಿಯಲ್ಲಿ ಈ ಸಬ್ಜೆಕ್ಟ್ ಸೂಕ್ತ ಎಂದು ತೀರ್ಮಾನಿಸಬೇಕೇ ಹೊರತು ಬ್ಲೈಂಡ್ ಆಗಿ ಇದನ್ನೇ ತಗೋ ಎಂದು ಹೇರಬಾರದು. ಮಗುವಿನ ಅಭಿರುಚಿ ಎತ್ತ ಕಡೆ ಅಧಿಕವಾಗಿದೆಯೋ ಆ ಕಡೆಗೇ ಒತ್ತು ಕೊಡಬೇಕು. ಜಸ್ಟ್ ಪಾಸ್ ಆಗಿ ಎಸ್.ಎಸ್.ಎಲ್.ಸಿ. ಮುಗಿಸಿರುವ ವಿದ್ಯಾರ್ಥಿಗೆ ಇನ್‌ಫ್ಲೂಯೆನ್ಸ್‌ನಿಂದಲೋ ಹಣದ ಪ್ರಭಾವದಿಂದಲೋ, ತಲೆಗೇ ಹೋಗದ ಕೋರ್ಸಿಗೆ ಸೇರಿಸಿದರೆ ಅವಳು ಅಥವಾ ಅವನು ಮುಂದುವರಿಯಲು ಸಾಧ್ಯವೇ ಇಲ್ಲ ಮತ್ತು ಇದು ಕೂಡದು. ಅಂದ ಹಾಗೆ ಎಲ್ಲ ಕೋರ್ಸುಗಳೂ ಉತ್ತಮವೇ, ಅತ್ಯುತ್ತಮವೇ. ಅದೇ ಸರಿ ಅನ್ನೀರಾ?

ಎಸ್. ಅದೇ ಸರಿ. ಇನ್ನೊಂದು ವಿಷಯ ಎಂದರೆ ಇಲ್ಲಿ ಸೊಸೈಟಿಯ ಪ್ರಭಾವ ಆಗಲೇಬಾರದು! ಅವರ ಮಗ ಸೈನ್ಸ್ ತಗೊಂಡ, ನನ್ ಮಗನೂ ಅದೇ ತೆಗೆದುಕೊಳ್ಳಲಿ, ಅವರ ಮಗ ಆ ಕಾಲೇಜಿಗೆ ಸೇರಿದ ನನ್ನ ಮಗನೂ ಅದೇ ಕಾಲೇಜಿಗೆ ಸೇರಲಿ ಅನ್ನೋದಕ್ಕಿಂತ ಮಗನ ಆಸಕ್ತಿಗೆ ಸೂಕ್ತವಾದ ವಿಷಯಕ್ಕೇ ಒತ್ತು ಕೊಡಬೇಕು.

ಅವನಿಗೆ ಸೂಕ್ತವಾದ ಸಬ್ಜೆಕ್ಟ್ ಇದೇ ಎಂದು ಹೇಗೆ ನಿರ್ಧರಿಸಬಹುದು?

ಅವನನ್ನು ಗ್ರಹಿಸುವುದರಿಂದ ಇದು ಸಾಧ್ಯವಾಗುತ್ತೆ. ಅದಾಗಲಿಲ್ಲ ಅಂದುಕೊಳ್ಳಿ ಪರಿಣಿತರಿಂದ ಸಲಹೆ ಕೂಡಾ ಪಡೆಯಬಹುದು. ಅವರು ಮಗುವಿನ ಅಂದರೆ ವಿದ್ಯಾರ್ಥಿಯನ್ನು ಕಾನ್ಫಿಡೆನ್ಸಿಗೆ ತೆಗೆದುಕೊಂಡು ಆಪ್ಟಿಟ್ಯೂಡ್ ಟೆಸ್ಟ್ ಅಂತ ಮಾಡ್ತಾರೆ ಅದರ ಆಧಾರದ ಮೇಲೆ ಅವರ ಬಲವನ್ನು ಗುರ್ತಿಸಿಕೊಳ್ಳಬಹುದು. ಅದು ಈಗಿನ ದಿನಗಳಲ್ಲಿಯಂತೂ ತುಂಬಾನೇ ಸಹಾಯಕಾರಿ.

ವಿದ್ಯಾರ್ಥಿಗಳು ಯಾವ ಕಾಲೇಜನ್ನು ಆರಿಸಿಕೊಳ್ಳೋದು ಸೂಕ್ತ ಅನ್ನಿಸುತ್ತೆ?

ದೊಡ್ಡಸ್ತಿಕೆಗೋ, ದುಡ್ಡಿಗೋ ತಮ್ಮ ಅನಿಸಿಕೆಯನ್ನು ಸೀಮಿತವಾಗಿಟ್ಟು ಇದೇ ಹೆಸರಾಂತ ಕಾಲೇಜು ಮತ್ತು ಇದೇ ಬೆಸ್ಟು ಅನ್ನೋ ನಿರ್ಧಾರಕ್ಕೆ ಬಂದು ಬಿಡಬಾರದು. ಎಲ್ಲ ಕಾಲೇಜುಗಳೂ ಬೆಸ್ಟೇ. ಎಲ್ಲ ಉಪನ್ಯಾಸಕರೂ ಉತ್ತಮರೇ! ಹಾಗೆ ಯೋಚಿಸುವುದಕ್ಕಿಂತ ತಮ್ಮ ಮನೆಗೆ ಸಮೀಪವಿರುವ ಕಾಲೇಜುಗಳ ಪಟ್ಟಿ ಮಾಡಿಕೊಳ್ಳಬೇಕು. ಅಲ್ಲಿ ಪಾಠ ಪ್ರವಚನ ಸರಿಯಾಗಿ ನಡೆಯುತ್ತಿದೆಯೇ ಎಂಬುದನ್ನು ಖಾತ್ರಿ ಪಡಿಸಿಕೊಳ್ಳಬೇಕು. ತ್ಯಾಗರಾಜನಗರದ ಹುಡುಗನನ್ನು ಯಲಹಂಕದ ಕಾಲೇಜಿಗೆ ಸೇರಿಸುವುದು ಅದೆಷ್ಟು ಸೂಕ್ತ ಯೋಚಿಸಿ? ಅವನ ಆಸಕ್ತಿ, ಶ್ರಮ ಎಲ್ಲ ಪ್ರಯಾಣದಲ್ಲೇ ಕಳೆದು ಹೋದರೆ. ಓದು ತಲೆಗೆ ಹತ್ತುವುದಾದರೂ ಹೇಗೆ?

ಟ್ಯೂಷನ್ ಹಾವಳಿ ಬಗ್ಗೆ ತಮ್ಮ ನಿಲುವೇನು? ನಾನಂತೂ ಇದರ ವಿರೋಧಿ. ಕಾಲೇಜಿಗೆ ಸೇರಿದ ತಕ್ಷಣ ತಮ್ಮ ಹುಡುಗ ಟ್ಯೂಷನ್ನಿಗೆ ಸೇರದಿದ್ದರೆ ಉದ್ಧಾರವಾಗುವುದೇ ಇಲ್ಲ. ಅನ್ನೋ ನಿರ್ಧಾರಕ್ಕೆ ತಂದೆ-ತಾಯಿಗಳೇ ಬಂದು ಬಿಡುತ್ತಾರೆ, ಅದು ಭ್ರಮೆ! ಓದಿನ ಅಂದರೆ ಆಸಕ್ತಿಯತ್ತ ವಿದ್ಯಾರ್ಥಿ ಮೈಂಡ್ ಸೆಟ್ ಮಾಡಿಕೊಳ್ಳುವುದರತ್ತ ಗಮನ ಹರಿಸಿದರೆ ಕಡಿಮೆ ಖರ್ಚಿನಲ್ಲಿ ವಿದ್ಯಾರ್ಥಿಯೇ ಹೆಚ್ಚಿನ ಅಂಕ ಗಳಿಸಿ ಬಿಡುತ್ತಾನೆ ಇದು ಶತಃ ಸಿದ್ಧ.

ಬುಧವಾರ 19ನೇ ಏಪ್ರಿಲ್ 2006



ಯೂತ್ ಹಾಸ್ಟೆಲ್ ಅಸೋಸಿಯೇಷನ್ ವತಿಯಿಂದ ನಡೆದ ರಾಷ್ಟ್ರೀಯ ನಿಸರ್ಗ ಅಧ್ಯಯನ ಮತ್ತು ಚಾರಣದಲ್ಲಿ ಪಾಲ್ಗೊಂಡಿದ್ದ ಮಕ್ಕಳಿಗೆ ಮಂಗಳವಾರ ಬೆಂಗಳೂರಿನಲ್ಲಿ ಏರ್ಪಡಿಸಲಾಗಿದ್ದ ಬೀಳ್ಕೊಡುಗೆ ಸಮಾರಂಭದಲ್ಲಿ ವೈಎಚ್‌ಎಐ ರಾಷ್ಟ್ರೀಯ ಸಂಸ್ಥಾಪಕ ಕಾರ್ಯದರ್ಶಿ ಆರ್.ಜೆ. ಪಡ್ಕಿ, ಮಾಜಿ ಕಾರ್ಯದರ್ಶಿ ಸಿ.ಎನ್.ಎನ್.ರಾಜು, ವೈಎಚ್‌ಎಐನ ಬೆಂಗಳೂರು ದಕ್ಷಿಣ ಘಟಕದ ಅಧ್ಯಕ್ಷ ವೂಡಿ ಓ.ಕೃಷ್ಣಾ, 'ಶಾಯರಿ ರಾಜ' ಅಸಾದುಲ್ಲಾ ಬೇಗ್ ಚಿಣ್ಣರ ಜೊತೆ ಸಮಾಲೋಚನೆ ನಡೆಸಿದರು.

ವಿಜಯ ಕರ್ನಾಟಕ, ಬೆಂಗಳೂರು
ಬುಧವಾರ 19 ಏಪ್ರಿಲ್ 2006

# ಹಿಮಾಲಯಕ್ಕೆ ಚಿಣ್ಣರ ದಂಡು

ಬೆಂಗಳೂರು, ಏ.18 - ತಾಯಿಯ ಮುಖದಲ್ಲಿ ತವಕ, ಅಪ್ಪನ ಮುಖದಲ್ಲಿ ಹೆಮ್ಮೆ. ಶಾಲಾ ಮಕ್ಕಳಲ್ಲಿ ಎಲ್ಲಿಲ್ಲದ ಉತ್ಸಾಹ. ಹಿಮಾಲಯವನ್ನೇ ಕೈಗಳಲ್ಲಿ ಹಿಡಿದಂತೆ ಹಿರಿ ಹಿರಿ ಹಿಗ್ಗುತ್ತಿದ್ದರು.

ಒಂದೆಡೆ ಅಪ್ಪತಂದ ಬೂಟನ್ನು ಮಕ್ಕಳು ಕುತೂಹಲ ದಿಂದ ವೀಕ್ಷಿಸುತ್ತಿದ್ದರೆ, ಮೊದಲ ಬಾರಿಗೆ ಮಗಳು/ಮಗನನ್ನು 15 ದಿನ ಬಿಟ್ಟಿರದ ತಾಯಂದಿರು ಕಣ್ಣಲ್ಲಿ ನೀರು ತುಂಬಿಕೊಂಡು ಮಕ್ಕಳ ತಲೆ ನೇವರಿಸುತ್ತಿದ್ದರು.

ಯೂತ್ ಹಾಸ್ಟೆಲ್ ಅಸೋಸಿಯೇಶನ್ ಆಫ್ ಇಂಡಿಯಾದ ಬೆಂಗಳೂರು ದಕ್ಷಿಣ ಶಾಖೆ ಶಾಲಾ ಮಕ್ಕಳ ತಂಡವನ್ನು ಹಿಮಾಲಯ ದರ್ಶನಕ್ಕೆ ಕರೆದುಕೊಂಡು ಹೋಗುವ ಕಾರ್ಯಕ್ರಮಕ್ಕೆ ಶುಭ ಹಾರೈಸಲು ಪಾಲಕರೆಲ್ಲ ನಗರದ ಯವನಿಕಾ ಸಭಾಂಗಣದಲ್ಲಿ ಮಂಗಳವಾರ ಸೇರಿದ್ದರು.

16 ದಿನಗಳ ಈ ಬೇಸಿಗೆ ಪ್ರವಾಸದಲ್ಲಿ ಮಕ್ಕಳು ಎಂಟು ದಿನ ಸಂಪೂರ್ಣ ಹಿಮದ ನಡುವೆ ನಡೆಯುತ್ತಾ, ಆಟವಾಡುತ್ತಾ, ಕಿತ್ತಾಡುತ್ತಾ, ಬಡಿದಾಡುತ್ತಾ ಸಂತಸವಾಗಿ ಕಳೆಯುತ್ತಾರೆ. ಹಲವು ಜೀವನಾವಶ್ಯಕ ಅಂಶವನ್ನು ಅರಿಯಲಿದ್ದಾರೆ. ಯೂತ್ ಹಾಸ್ಟೆಲ್ ಈ ಮಕ್ಕಳಿಗೆ ಊಟ, ವಸತಿ ವ್ಯವಸ್ಥೆಯನ್ನು ಮಾಡಿದೆ. ಎಲ್ಲಿಯೂ ಏನೂ ಕಡಿಮೆ ಆಗದ ರೀತಿ ಮಕ್ಕಳನ್ನು ನೋಡಿಕೊಳ್ಳುವ ಭರವಸೆಯನ್ನು ಕಾರ್ಯಕರ್ತರು ಪಾಲಕರಿಗೆ ಅಲ್ಲಿ ಮನದಟ್ಟು ಮಾಡುತ್ತಿದ್ದ ದೃಶ್ಯ ಸಾಮಾನ್ಯವಾಗಿತ್ತು.

85 ಮಕ್ಕಳು ಒಟ್ಟು ನಾಲ್ಕು ವಿಭಾಗವಾಗಿ ಹಿಮಾಲಯ ಪ್ರವಾಸ ಕೈಗೊಳ್ಳುವರು. ಮೊದಲ ತಂಡ ಬುಧವಾರ (ಏ.19) ಲಾಲ್‌ಬಾಗ್ ಉದ್ಯಾನದಿಂದ ಸಾಯಂಕಾಲ 6.30ಕ್ಕೆ ಹೊರಡಲಿದೆ. ಎರಡನೇ ತಂಡ 25 ರಂದು, 3ನೇ ತಂಡ ಮೇ 1 ಹಾಗೂ ಕೊನೆಯ ತಂಡ ಮೇ 8 ರಂದು ನಗರವನ್ನು ಬಿಡಲಿವೆ.

'10 ಮಕ್ಕಳ ಗುಂಪಿಗೆ ಒಬ್ಬ ನಾಯಕ ಇರುತ್ತಾನೆ. ಬೆಂಗಳೂರಿನಿಂದ ದಿಲ್ಲಿ ಹಾಗೂ ಅಲ್ಲಿಂದ ಕಾಲ್ಕಡಿಗೆ. ಪ್ರವಾಸ ಆರಂಭ ಸ್ಥಳದವರೆಗೆ ಬಸ್‌ನಲ್ಲಿ ಪ್ರಯಾಣ. ಅಲ್ಲಿಂದ ತಂಡ ನಾಲ್ಕು ದಿನ ಹಿಮಾಲಯ ಪರ್ವತ ಹತ್ತಿ 'ಚಂದ್ರಕಾನಿ ಪಾಸ್' ತಲುಪಲಿದೆ. ಅಲ್ಲಿಂದ ತಿರುಗಿ ಹೊರಟು ನಾಲ್ಕು ದಿನದಲ್ಲಿ ಮನಾಲಿ ತಲುಪಿ, ನಗರಕ್ಕೆ ಹಿಂತಿರುಗಲಿದೆ' ಎಂದು ಯೂತ್ ಹಾಸ್ಟೆಲ್ ಅಧ್ಯಕ್ಷ ರಮೇಶ್ ಬಾಬು ತಿಳಿಸಿದರು.



ಶೇಷಾದ್ರಿಪುರಂ ಎಜ್ಯುಕೇಷನ್ ಟ್ರಸ್ಟ್ ನಗರದಲ್ಲಿ ಏರ್ಪಡಿಸಿದ್ದ 'ಶಿಕ್ಷಕರ ಸರ್ವಾಂಗೀಣ ಅಭಿವೃದ್ಧಿ' ಕಾರ್ಯಕ್ರಮದಲ್ಲಿ ಶಿಕ್ಷಕರ ಜತೆ ಭಾರತೀಯ ವಿದ್ಯಾಭವನದ ಕಾರ್ಯಕಾರಿ ನಿರ್ದೇಶಕ ಮತ್ತೂರು ಕೃಷ್ಣಮೂರ್ತಿ ಮತ್ತು ಶೇಷಾದ್ರಿಪುರಂ ಟ್ರಸ್ಟ್ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಪಿ.ಕೃಷ್ಣ

ರಾಜ್ಯಪ್ರಗತಿ 10-4-2006

# ಲಯನ್ಸ್ ಕ್ಲಬ್ ಮಾಧವನಗರಕ್ಕೆ ಮುಖ್ಯಮಂತ್ರಿಗಳ ಫಲಕ



ರಕ್ತದಾನದ ಬಗೆಗೆ ಜನರಲ್ಲಿ ಜಾಗೃತಿ ಮೂಡಿಸಿ, ಹೆಚ್ಚು ಹೆಚ್ಚು ಶಿಬಿರಗಳನ್ನು ಹಮ್ಮಿಕೊಂಡು ಬರುತ್ತಿರುವ ಮಾಧವನಗರ ಲಯನ್ಸ್ ಕ್ಲಬ್‌ಗೆ ಮುಖ್ಯಮಂತ್ರಿಗಳ ಫಲಕ ಲಭಿಸಿದೆ. ಇತ್ತೀಚೆಗೆ ನಡೆದ ಸಮಾರಂಭದಲ್ಲಿ ಸಚಿವ ಚೆಲುವರಾಯಸ್ವಾಮಿ ಅವರಿಂದ ಕ್ಲಬ್ ಅಧ್ಯಕ್ಷ ಸೊ.ಚ.ಪುಟ್ಟಮಾರಯ್ಯ, ಕಾರ್ಯದರ್ಶಿ ಮಧುರಾ ಅಶೋಕಕುಮಾರ್ ಅವರು ಫಲಕ ಸ್ವೀಕರಿಸಿದರು. ಶೇಷಾದ್ರಿಪುರ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ.ಕೃಷ್ಣ, ರೆಡ್‌ಕ್ರಾಸ್ ಕರ್ನಾಟಕ ಘಟಕದ ಆಡಳಿತಾಧಿಕಾರಿ ರಾಜು ಚಂದ್ರಶೇಖರ್ ಚಿತ್ರದಲ್ಲಿದ್ದಾರೆ.

ಬೆಂಗಳೂರು ವಿಜಯ
ಸೋಮವಾರ 27 ಮಾರ್ಚ್ 2006

# ಶಾಲಾ ಮಕ್ಕಳಿಗೆ ಪದವಿ ಪ್ರದಾನ

ಬೆಂಗಳೂರು: ಶೇಷಾದ್ರಿಪುರ ಹಿರಿಯ ಪ್ರಾಥಮಿಕ ಆಂಗ್ಲ ಶಾಲೆಯ 2005-06ನೇ ಸಾಲಿನ ಪದವಿ ಪ್ರದಾನ ಸಮಾರಂಭ ಇತ್ತೀಚೆಗೆ ಶಾಲಾ ಆವರಣದಲ್ಲಿ ನಡೆಯಿತು.

ಶಾಲೆಯ ವಿದ್ಯಾರ್ಥಿಗಳು ಹಾಗೂ ಉಪಾಧ್ಯಾಯ ವೃಂದದ ವಿಷ್ಣು ಸಹಸ್ರ ನಾಮದೊಂದಿಗೆ ಕಾರ್ಯಕ್ರಮಕ್ಕೆ ಚಾಲನೆ ನೀಡಲಾಯಿತು. ಸಂಸ್ಥೆಯ ಅಧ್ಯಕ್ಷ ಕೆ.ಎಂ. ನಂಜಪ್ಪ ಸಭಾ ಕಾರ್ಯಕ್ರಮ ಉದ್ಘಾಟಿಸಿದರು.

ಇದೇ ಸಂದರ್ಭದಲ್ಲಿ ಏಳನೇ ತರಗತಿ ವಿದ್ಯಾರ್ಥಿಗಳು ದೀಪ ಬೆಳಗಿಸಿ 6ನೇ ತರಗತಿಯ ವಿದ್ಯಾರ್ಥಿನಿ ಭವ್ಯಾಗೆ ಶಾಲೆಯ ನಾಯಕತ್ವವನ್ನು ಹಸ್ತಾಂತರಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶಿಕ್ಷಣ ತಜ್ಞ ಪ್ರೊ. ಜಿ.ಎಸ್. ಮುಡಮಡಿತಾಯ, ವಿದ್ಯಾರ್ಥಿಗಳಿಗೆ ಹಿತವಚನ ನೀಡಿದರು.

ಸಂಘದ ಮುಖ್ಯ ಕಾರ್ಯದರ್ಶಿ ಪೂಡೆ ಪಿ. ಕೃಷ್ಣ, ಸಹ ಕಾರ್ಯದರ್ಶಿ ರಾಮಕೃಷ್ಣ, ಶಾಲೆಯ ಮುಖ್ಯೋಪಾಧ್ಯಾಯಿನಿ ವಿ. ನೇತ್ರಮಣಿ, ಶಾಲೆಯ ಉಪಾಧ್ಯಾಯ ವರ್ಗ ಮತ್ತು ಸಿಬ್ಬಂದಿ ವರ್ಗ ಹಾಗೂ ಏಳನೇ ತರಗತಿ ಮಕ್ಕಳ ಪೋಷಕರು ಸಮಾರಂಭದಲ್ಲಿ ಹಾಜರಿದ್ದರು.



ಶೇಷಾದ್ರಿಪುರ ಹಿರಿಯ ಪ್ರಾಥಮಿಕ ಆಂಗ್ಲ ಶಾಲೆಯ 2005-06ನೇ ಸಾಲಿನ ಮಕ್ಕಳಿಗೆ ಕೆ.ಎಂ. ನಂಜಪ್ಪ ಪದವಿ ಪ್ರದಾನ ಮಾಡಿದರು. ಪ್ರೊ. ಜಿ.ಎಸ್. ಮುಡಮಡಿತಾಯ ಹಾಜರಿದ್ದರು.

ಉದಯವಾಣಿ
ಗುರುವಾರ 9 ಮಾರ್ಚ್ 2006




ಶೇಷಾದ್ರಿಪುರ ಶಿಕ್ಷಣ ದತ್ತಿಯು ಮಂಡ್ಯ ಜಿಲ್ಲೆಯ ಆದಿಚುಂಚನಗಿರಿ ಕ್ಷೇತ್ರದಲ್ಲಿ ಇತ್ತೀಚೆಗೆ 'ಸ್ನೇಹ ಸಮ್ಮಿಲನ' ಎಂಬ ಕಾರ್ಯಕ್ರಮ ಹಮ್ಮಿಕೊಂಡಿತ್ತು. ಆದಿಚುಂಚನಗಿರಿ ಶಾಖಾಮಠದ ಪುರುಷೋತ್ತಮಾನಂದ ಸ್ವಾಮೀಜಿ, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷ ಕೆ.ಎಂ. ನಂಜಪ್ಪ, ಕಾರ್ಯದರ್ಶಿ ಡಬ್ಲ್ಯು.ಕೃಷ್ಣ ಮುಂತಾದವರು ಉಪಸ್ಥಿತರಿದ್ದರು.

ಈ ಸಂಜೆ ೮-೩-೨೦೦೬ ಬುಧವಾರ




ಬೆಂಗಳೂರಿನ ಶೇಷಾದ್ರಿಪುರ ಶಿಕ್ಷಣ ಸಂಸ್ಥೆ, ಸ್ನೇಹ-ಸೇತು ಎಂಬ ನೂತನ ಕಾರ್ಯಕ್ರಮವನ್ನು ನಾಗಮಂಗಲ ತಾಲ್ಲೂಕಿನ ಆದಿಚುಂಚನಗಿರಿ ಕ್ಷೇತ್ರದಲ್ಲಿ ಏರ್ಪಡಿಸಿದ್ದ ಸಂದರ್ಭದಲ್ಲಿ ಶಾಖಾ ಮಠದ ಶ್ರೀ ಪುರುಷೋತ್ತಮಾನಂದ ಸ್ವಾಮೀಜಿ ಅವರನ್ನು ಸನ್ಮಾನಿಸಲಾಯಿತು. ಸಂಸ್ಥೆಯ ಕೆ.ಎಂ.ನಂಜಪ್ಪ, ಕೃಷ್ಣ ಮತ್ತಿತರರು ಹಾಜರಿದ್ದರು.

ಬಹುಜನ ಕನ್ನಡಿಗರು

ಮಾರ್ಚ್ ೧, ೨೦೦೬

# ಶಿಕ್ಷಣವು ಮಕ್ಕಳ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟಾಗದಂತಿರಬೇಕು

-ಮೂಡೆ ಪಿ. ಕೃಷ್ಣ

ಮಕ್ಕಳಿಗೆ ವಿದ್ಯೆ ನೀಡುವಾಗ ಅವರ ಸ್ವಾತಂತ್ರ್ಯಕ್ಕೆ ಧಕ್ಕೆಬಾರದ ಹಾಗೆ ನೋಡಿಕೊಳ್ಳಬೇಕೇ ಹೊರತು ವಾಣಿಜ್ಯೀಕರಣಗೊಳಿಸಬಾರದು ಎಂದು ಖ್ಯಾತ ಶಿಕ್ಷಣ ತಜ್ಞ ಮೂಡೆ ಪಿ. ಕೃಷ್ಣರವರು ಅಭಿಪ್ರಾಯಪಟ್ಟರು.

ಬುದ್ಧ, ಬಸವ, ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಇತ್ತೀಚೆಗೆ ಏರ್ಪಡಿಸಿದ್ದ ಸಾಂಸ್ಕೃತಿಕ ಸ್ಪರ್ಧೆಗಳು- ಪುಸ್ತಕಗಳ ಬಿಡುಗಡೆ ಹಾಗೂ ಸನ್ಮಾನ ಕಾರ್ಯಕ್ರಮವನ್ನು ಉದ್ಘಾಟನೆ ಮಾಡಿ ಸನ್ಮಾನ ಸ್ವೀಕರಿಸಿ ಅವರು ಮಾತನಾಡುತ್ತಿದ್ದರು.

ಇಂದು ಪಾಲಕರು ತಮ್ಮ ಮಕ್ಕಳನ್ನು ಇಂಜನಿಯರ್, ಡಾಕ್ಟರ್ ಮಾಡಬೇಕೆನ್ನುವ ದಿಶೆಯಲ್ಲಿ ದಿಢೀರ್ ಶ್ರೀಮಂತರಾಗಬೇಕೆನ್ನುವ ಹಂಬಲದಿಂದ ಮಕ್ಕಳ ಮೇಲೆ ಒತ್ತಡ ಹೇರುವ ಮೂಲಕ ಅವರು ತಪ್ಪು ಮಾಡುವುದನ್ನು ನಾವೇ ಕಲಿಸುತ್ತಿದ್ದೇವೆ ಎಂದರು. ಸಮಾರಂಭದಲ್ಲಿ ಕೃಷ್ಣ ಅವರನ್ನು ಜಾನಪದ ತಜ್ಞ ಡಾ॥ನಲ್ಲೂರು ಪ್ರಸಾದ್‌ರವರು ಸನ್ಮಾನಿಸಿದರು.

ಯಂಡಮೂರಿ ವೀರೇಂದ್ರನಾಥ್‌ರವರ "ಪಾಲಕರಿಗೆ ಗೊತ್ತಿಲ್ಲ, ಶಿಕ್ಷಕರು ಹೇಳಲ್ಲ" ಕೃತಿಯನ್ನು ವಿಜಯ ಕರ್ನಾಟಕ ಪತ್ರಿಕೆಯ ಸಂಪಾದಕರಾದ ವಿಶ್ವೇಶ್ವರ ಭಟ್‌ರವರು ಬಿಡುಗಡೆ ಮಾಡಿ ಮಾತನಾಡುತ್ತ ಲೇಖಕರಾದವರಿಗೆ ಒಂದು ಬದ್ಧತೆ ಮತ್ತು ತಾತ್ವಿಕತೆಯಿರಬೇಕಾದ್ದು ಅವಶ್ಯಕವಾಗಿದ್ದು ಅದು ಯಂಡಮೂರಿಯವರಲ್ಲಿ ಮತ್ತು ಅವರ ಕೃತಿಗಳಲ್ಲಿದೆ ಎಂದರು.



ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಶಿಕ್ಷಣ ತಜ್ಞ ಮೂಡೆ ಪಿ. ಕೃಷ್ಣ ಅವರನ್ನು ಇತ್ತೀಚೆಗೆ ಬುದ್ಧ, ಬಸವ, ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಗೌರವಿಸಿದ ಚಿತ್ರ. ಚಿತ್ರದಲ್ಲಿ ಪತ್ರಕರ್ತರಾದ ವಿಶ್ವೇಶ್ವರ ಭಟ್, ಈಶ್ವರ ದೈತೋಟ, ಸಾಹಿತಿಗಳಾದ ಡಾ॥ನಲ್ಲೂರು ಪ್ರಸಾದ್, ಯಂಡಮೂರಿ ವೀರೇಂದ್ರನಾಥ, ಪ್ರೊ॥ಬಲ್ಲೇಗೌಡ, ಸಿ.ಸಿ.ರಾ. ಮೊದಲಾದವರಿದ್ದಾರೆ.

## ಶ್ಲಾಘನೀಯ ಸಾಹಿತ್ಯ ಸೃಷ್ಠಿ

ಸಂಯುಕ್ತ ಕರ್ನಾಟಕ ಪತ್ರಿಕೆಯ ಸಂಪಾದಕರಾದ ಈಶ್ವರದೈತೋಟರವರು ಯಂಡಮೂರಿಯವರ ಮತ್ತೊಂದು ಕೃತಿ 'ತಪ್ಪು ಮಾಡೋಣ ಬನ್ನಿ' ಪುಸ್ತಕ ಬಿಡುಗಡೆ ಮಾಡಿ ಮಾತನಾಡುತ್ತ ಮನುಷ್ಯ ತಪ್ಪು ಮಾಡುವ ಮೂಲಕ ಮುಂದೆ ಮಾಡಬಹುದಾದ ಅನಾಹುತಗಳ ಬಗ್ಗೆ ಎಚ್ಚರ ವಹಿಸುವಂತಾಗುತ್ತದೆ ಎಂದು ನುಡಿದರು. ಆ ನಿಟ್ಟಿನಲ್ಲಿ ಯಂಡಮೂರಿಯವರ ಸಾಹಿತ್ಯ ಸೃಷ್ಠಿ ಶ್ಲಾಘನೀಯವೆಂದರು.

ಶಿಕ್ಷಕರಾದ ಎಂ.ಜಿ. ಸತ್ಯನಾರಾಯಣರವರ 'ಮುಂಗಾರು' ಕವನ ಸಂಕಲನವನ್ನು ಯಂಡಮೂರಿ ವೀರೇಂದ್ರನಾಥ್‌ರವರು ಬಿಡುಗಡೆ ಮಾಡಿ, ತಮ್ಮ ಸಾಹಿತ್ಯ ಮತ್ತು ಜೀವನ ಕುರಿತಾದ ಬಗ್ಗೆ ವಿವರವಾಗಿ ತಿಳಿಸಿಕೊಟ್ಟರು.

ಸಾಹಿತಿ ಡಾ॥ನಲ್ಲೂರು ಪ್ರಸಾದ್ ಅಧ್ಯಕ್ಷತೆ ವಹಿಸಿದ್ದರು. ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಸಿಸಿರಾ ಎಲ್ಲರನ್ನು ಸ್ವಾಗತಿಸಿದರು. ಪ್ರೊ॥ಕೆ. ಬಲ್ಲೇಗೌಡರವರು ಕಾರ್ಯಕ್ರಮ ನಿರೂಪಿಸಿದರು. ಡಾ॥ಬಿ.ಟಿ. ಚಿಕ್ಕಪುಟ್ಟೇಗೌಡರನರು ಉಪಸ್ಥಿತರಿದ್ದರು. ಯುವಗಾಯಕ ಯು.ಎಂ. ರವಿಯವರು ಹಾಡಿದ ನಾಡಗೀತೆಯೊಂದಿಗೆ ಕಾರ್ಯಕ್ರಮ ಆರಂಭವಾಯಿತು. ಉಪನ್ಯಾಸಕರಾದ ಮುಕುಂದರವರು ವಂದಿಸಿದರು.

## ಡಾ॥ತಮಿಳ್ ಸೆಲ್ವಿಯವರಿಗೆ ಮನೋಹರಿ ಪಾರ್ಥಸಾರಥಿ ಪ್ರಶಸ್ತಿ

ಅಂದು ಸಂಜೆ ನಡೆದ ಸಮಾರಂಭದಲ್ಲಿ ಮದರಾಸು ವಿ.ವಿ. ಕನ್ನಡ ಉಪನ್ಯಾಸಕ ಹಾಗೂ ಶಾಸನ ತಜ್ಞೆ ಡಾ॥ತಮಿಳ್ ಸೆಲ್ವಿಯವರಿಗೆ ಖ್ಯಾತ ಕಾದಂಬರಿ ಗಾರ್ತಿ ಪ್ರೇಮಾಭಟ್‌ರವರು 'ಮನೋಹರಿ ಪಾರ್ಥಸಾರಥಿ ಮಹಿಳಾ ಸಾಂಸ್ಕೃತಿಕ ಪ್ರಶಸ್ತಿ' ಯನ್ನು ನೀಡಿ ಗೌರವಿಸಿದರು.

ಪ್ರಶಸ್ತಿಗಳು ಇಂದು ಸಮಾಜದಲ್ಲಿ ಮೌಲ್ಯ ಕಳೆದುಕೊಳ್ಳುತ್ತಿದ್ದು, ಅರ್ಹರಾದವರರೆನಿಸಿದ್ರೆ ಅರ್ಜಿ ಹಾಕಿ ಪ್ರಶಸ್ತಿ, ಮಾನ-ಸಮ್ಮಾನಗಳನ್ನು ಸ್ವೀಕರಿಸುವ ಸ್ಥಿತಿ ನಮ್ಮಲ್ಲಿ ಬರಬಾರದೆಂದ ಪ್ರೇಮಾ ಭಟ್ ಅವರು ಡಾ॥ ಸೆಲ್ವಿಯವರು ಕನ್ನಡವನ್ನು ಹೊರನಾಡಿನಲ್ಲಿ ಪಸರಿಸುವಂತೆ ಮಾಡುತ್ತಿದ್ದು ಸಂಶೋಧನಾ ಕ್ಷೇತ್ರವನ್ನು ಆರಿಸಿಕೊಂಡು ದುಡಿಯುತ್ತಿರುವುದನ್ನು ಶ್ಲಾಘಿಸಿದರು.

೧೫೦೦ ರೂ. ನಗದು, ಪ್ರಶಸ್ತಿ ಫಲಕ, ಪ್ರಮಾಣ ಪತ್ರ, ಶಾಲು, ಫಲ ತಾಂಬೂಲ ನೀಡಿ ಸೆಲ್ವಿಯವರನ್ನು ಗೌರವಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸಾಂಸ್ಕೃತಿಕ ಚಿಂತಕ ಮಾಗಡಿಯ ಪಾನ್ಯಂ ನಟರಾಜ್ ವಹಿಸಿದ್ದರು. ಉದ್ಯಮಿ ಎಸ್. ನಿಜಲಿಂಗೇಗೌಡ ಮುಖ್ಯ ಅತಿಥಿಗಳಾಗಿದ್ದರು. ವೇದಿಕೆಯಲ್ಲಿ ಜಿಲ್ಲಾ ಕ.ಸಾ.ಪ. ಅಧ್ಯಕ್ಷ ಸಿಸಿರಾ, ಪ್ರೊ॥ಬಲ್ಲೇಗೌಡ, ಮ.ಟಿ. ದೊಡ್ಡಯ್ಯ ಮುಂತಾದವರು ಉಪಸ್ಥಿತರಿದ್ದರು.

## ಕವಿಗೋಷ್ಠಿ

ಚನ್ನಪಟ್ಟಣದ ಮತ್ತೀಕೆರೆ ಬಿ. ಚಲುವರಾಜ್‌ರವರ ಅಧ್ಯಕ್ಷತೆಯಲ್ಲಿ ವಿಶೇಷ ಕವಿಗೋಷ್ಠಿ ಏರ್ಪಡಿಸಲಾಗಿತ್ತು. ಬಿ. ಇಂದಿರಾ, ಅಪ್ಪಾಜಿ, ಚಿಕ್ಕಲಿಂಗೇಗೌಡ, ಕೃಷ್ಣಾನಾಯಕ್, ಮಹಂತೇಶ್, ನಾಗರತ್ನ ಚಂದ್ರಶೇಖರ್ ತಮ್ಮ ಸ್ವರಚಿತ ಕವನಗಳನ್ನು ವಾಚಿಸಿದರು.

ವರದಿ : ಬಿ.ಟಿ. ಮುದ್ದೇಶ್

ಉದಯವಾಣಿ

ಸೋಮವಾರ 27 ಫೆಬ್ರವರಿ 2006

# ಕೃಷ್ಣಯ್ಯ, ಶಿವಮೊಗ್ಗ ಸುಬ್ಬಣ್ಣರಿಗೆ ಸನ್ಮಾನ



ಶೇಷಾದ್ರಿಪುರ

**ಶೇ**ಷಾದ್ರಿಪುರಂ ಕಾಲೇಜಿನ ಕನ್ನಡ ಸಂಘದ ವತಿಯಿಂದ ಸುವರ್ಣ ರಾಜ್ಯೋತ್ಸವ ನಿಮಿತ್ತ ನಡೆದ 'ಕನ್ನಡ ಹಬ್ಬ' ಕಾರ್ಯಕ್ರಮದಲ್ಲಿ ಪ್ರೊ। ಎಂ.ಎಚ್. ಕೃಷ್ಣಯ್ಯ ಹಾಗೂ ಸುಗಮ ಸಂಗೀತ ಗಾಯಕ ಶಿವಮೊಗ್ಗ ಸುಬ್ಬಣ್ಣ ಅವರನ್ನು ಸನ್ಮಾನಿಸಲಾಯಿತು.

ಸನ್ಮಾನಕ್ಕೆ ಉತ್ತರವಾಗಿ ಮಾತನಾಡಿ ಶಿವಮೊಗ್ಗ ಸುಬ್ಬಣ್ಣ ಅವರು ತಮ್ಮ ಹಿತನುಡಿಗಳಿಂದ, ಮಧುರ ಹಾಡುಗಳಿಂದ ವಿದ್ಯಾರ್ಥಿಗಳ ಮನ ರಂಜಿಸಿದರು. ಪ್ರೊ। ಎಂ.ಎಚ್. ಕೃಷ್ಣಯ್ಯ ಅವರು ಕನ್ನಡ ವಿಭಾಗ ನಡೆಸಿದ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಬಹುಮಾನಗಳನ್ನು ವಿತರಿಸಿದರು.

ಈ ಸಂದರ್ಭದಲ್ಲಿ ವಿದ್ಯಾರ್ಥಿಗಳು ನಡೆಸಿಕೊಟ್ಟ ಸಾಂಸ್ಕೃತಿಕ ಕಾರ್ಯಕ್ರಮಗಳು ಹಾಗೂ ಕಾಲೇಜಿನ ಐಚ್ಛಿಕ ಕನ್ನಡ ವಿದ್ಯಾರ್ಥಿಗಳು ಸಿದ್ಧಪಡಿಸಿದ 'ಶಶಾಂಕ' ಎಂಬ ಕೈಬರಹದ ಗೋಡೆ ಪತ್ರಿಕೆಯನ್ನು ಬಿಡುಗಡೆಗೊಳಿಸಲಾಯಿತು.

ವೇದಿಕೆಯಲ್ಲಿ ಶೇಷಾದ್ರಿಪುರಂ ಕಾಲೇಜಿನ ಪ್ರಾಂಶುಪಾಲ ಎಸ್.ಎನ್. ದೊರೈರಾಜ್, ದತ್ತಿಯ ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಮತ್ತಿತರ ಗಣ್ಯರು ಉಪಸ್ಥಿತರಿದ್ದರು.

ಸಂಜೆವಾಣಿ

ಭಾನುವಾರ 26 ಫೆಬ್ರವರಿ 2006



ಲಯನ್ ಸಂಸ್ಥೆ ಬೆಂಗಳೂರು ಮಾಧವನಗರ, ಶೇಷಾದ್ರಿಪುರ ಸಂಜೆ ಪದವಿ ಕಾಲೇಜು, ಭಾರತ ಸೇವಾದಳ ಸಂಯುಕ್ತ ಆಶ್ರಯದಲ್ಲಿ ಸ್ವಾತಂತ್ರ ಹೋರಾಟಗಾರ ದಿ. ಐ.ಎನ್.ಎ. ರಾಮರಾವ್‌ರವರ ಮೊದಲ ಪುಣ್ಯತಿಥಿ ಅಂಗವಾಗಿ ಸ್ವಯಂ ರಕ್ತದಾನ ಶಿಬಿರದ ಉದ್ಘಾಟನೆಯನ್ನು ಜಾಫರ್ ಷರೀಫ್ ನೆರವೇರಿಸಿದರು.

ರಾಜ್ಯಪ್ರಗತಿ

25-2-2006



ಬಿ.ಟಿ.ಲಕ್ಷ್ಮಣ್‌ಗೆ ನೇತಾಜಿ ಪ್ರಶಸ್ತಿ ಪ್ರದಾನ: ಬಿ.ಎನ್.ಬಚ್ಚೇಗೌಡ, ಟಿ.ವೆಂಕಟೇಶ್, ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮೀಜಿ, ವಿಧಾನಸಭಾಧ್ಯಕ್ಷ ಕೃಷ್ಣ ಆರ್‌ಕೃಷ್ಣ, ಮೂಡೆ ಪಿ.ಕೃಷ್ಣ ಮತ್ತು ಎಸ್.ಲಕ್ಕಣ್ಣ ಇದ್ದಾರೆ.



ಲಯನ್ಸ್ ಸಂಸ್ಥೆ ಮಾಧವನಗರ ಹಾಗೂ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಸಂಯುಕ್ತವಾಗಿ ಶೇಷಾದ್ರಿಪುರ ಸಂಜೆ ಪದವಿ ಕಾಲೇಜಿನಲ್ಲಿ ಏರ್ಪಡಿಸಿದ್ದ ರಕ್ತದಾನ ಶಿಬಿರದಲ್ಲಿ ಮಾಜಿ ಸಚಿವ ಸಿ.ಕೆ. ಜಾಫರ್ ಷರೀಫ್, ಮಾಜಿ ಮೇಯರ್ ಕೆ.ಎಂ. ನಂಜಪ್ಪ, ರಕ್ತನಿಧಿ ಅಧ್ಯಕ್ಷ ರಾಜು ಚಂದ್ರಶೇಖರ್, ವೊಡೆ ಪಿ. ಕೃಷ್ಣ ಭಾಗವಹಿಸಿದ್ದರು.

ಸಂಯುಕ್ತ ಕರ್ನಾಟಕ
24-2-2006

# ಕನ್ನಡಿಗರನ್ನು ಬಡಿದೆಬ್ಬಿಸುವ ಕೆಲಸ ಆಗಬೇಕು: ಸುಬ್ಬಣ್ಣ

ಬೆಂಗಳೂರು, ಫೆ. 23-. 'ಕನ್ನಡಿಗರನ್ನು ಬಡಿದೆಬ್ಬಿಸುವ ಕೆಲಸ ಈಗ ಆಗಬೇಕಾಗಿದೆ' ಎಂದು ರಾಷ್ಟ್ರ ಪ್ರಶಸ್ತಿ ಪುರಸ್ಕೃತ ಹಾಗೂ ಸುಪ್ರಸಿದ್ಧ ಗಾಯಕ ಶಿವಮೊಗ್ಗ ಸುಬ್ಬಣ್ಣ ಹೇಳಿದರು.

ಶೇಷಾದ್ರಿಪುರಂ ಕಾಲೇಜು ಕನ್ನಡ ಸಂಘ ಆಯೋಜಿಸಿದ್ದ ಸುವರ್ಣ ಕರ್ನಾಟಕ ಆಚರಣೆಯ 'ಕನ್ನಡ ಹಬ್ಬ 2006'ರ ಸಮಾರಂಭಕ್ಕೆ ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಶಿವಮೊಗ್ಗ ಸುಬ್ಬಣ್ಣ 'ವಿದ್ಯಾರ್ಥಿಗಳು ಅಂಕ ಗಳಿಸುವುದಕ್ಕಿಂತ ಹೆಚ್ಚಾಗಿ ವ್ಯಕ್ತಿತ್ವ, ಮನುಷ್ಯತ್ವ ಮತ್ತು ಕನ್ನಡ ಅಭಿಮಾನವನ್ನು ಬೆಳೆಸಿಕೊಳ್ಳಬೇಕು' ಎಂದು ಹೇಳಿದರು.

ಶೇಷಾದ್ರಿಪುರಂ ಕಾಲೇಜಿನ ಐಚ್ಛಿಕ ಕನ್ನಡ ವಿದ್ಯಾರ್ಥಿಗಳು ತರುವ 'ಶಶಾಂಕ' ಗೋಡೆ ಪತ್ರಿಕೆಯನ್ನು ಬಿಡುಗಡೆ ಮಾಡಿದ ವಿಮರ್ಶಕ ಪ್ರೊ. ಎಂ.ಎಚ್. ಕೃಷ್ಣಯ್ಯ ಮಾತನಾಡಿ, ಕನ್ನಡಕ್ಕೆ ಶಾಸ್ತ್ರೀಯ ಭಾಷಾ ಸ್ಥಾನಮಾನದ ಜೊತೆಗೆ ಆಡಳಿತದಲ್ಲಿ ಕನ್ನಡ ಭಾಷೆಯನ್ನು ತರಬೇಕು. ಶಾಸ್ತ್ರೀಯ ಭಾಷೆ ನೀಡುವುದು ಮೃತ ಭಾಷೆಗಳಿಗೆ ಮಾತ್ರ. ಆದರೆ ಕನ್ನಡ ಮೃತ ಭಾಷೆಯಲ್ಲ, ತಮಿಳು ಕೂಡ ಮೃತ ಭಾಷೆಯಲ್ಲ, ಅದಕ್ಕೆ ಶಾಸ್ತ್ರೀಯ ಭಾಷಾ ಸ್ಥಾನ ದೊರೆತಿರುವುದು ರಾಜಕೀಯ ಕಾರಣದಿಂದ ಎಂದು ಹೇಳಿದರು.

'ತಮಿಳರು ನಮ್ಮನ್ನು ಆಂತರಿಕ ಗುಲಾಮರನ್ನಾಗಿ ಮಾಡಿಕೊಳ್ಳುತ್ತಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿ ತಮ್ಮ ಕೃತಿಗಳ ಮೂಲಕ ಹೆಚ್ಚಿನ ಸ್ಥಾನವನ್ನು ಪಡೆಯಲು ಅಪೇಕ್ಷಿಸುತ್ತಿದ್ದಾರೆ. ಆದರೆ ನಮಗೆ ಆ ಸ್ಥಾನಬೇಕಿಲ್ಲ, ಕನ್ನಡ ಭಾಷೆ, ಸಂಸ್ಕೃತಿಯನ್ನು ಬೆಳೆಸುವಂತಹ ಕೆಲಸವನ್ನು ಯುವ ಜನತೆ ಮಾಡಬೇಕಾಗಿದೆ' ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆಯನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆ ಅಧ್ಯಕ್ಷ ಕೆ.ಎಂ. ನಂಜಪ್ಪ ವಹಿಸಿದ್ದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಆಡಳಿತ ಮಂಡಳಿಯ ಸದಸ್ಯರಾದ ಡಬ್ಲ್ಯು.ಪಿ. ಕೃಷ್ಣ, ನಟರಾಜ, ಶ್ರೀನಿವಾಸಯ್ಯ, ಕಾಲೇಜಿನ ಪ್ರಾಂಶುಪಾಲರಾದ ದೊರೈರಾಜ್, ಉಪ ಪ್ರಾಂಶುಪಾಲ ನರಹಳ್ಳಿ ಬಾಲಸುಬ್ರಹ್ಮಣ್ಯಂ, ಸ್ನಾತಕೋತ್ತರ ಅಧ್ಯಯನ ಕೇಂದ್ರದ ಮುಖ್ಯಸ್ಥ ದೊಡ್ಡರಂಗೇಗೌಡರು ವೇದಿಕೆಯಲ್ಲಿ ಉಪಸ್ಥಿತರಿದ್ದರು. ವಿವಿಧ ಸ್ಪರ್ಧೆಗಳಲ್ಲಿ ಭಾಗವಹಿಸಿದ್ದ ವಿದ್ಯಾರ್ಥಿಗಳಿಗೆ ಬಹುಮಾನ ವಿತರಣೆ ಮಾಡಲಾಯಿತು. ಮುಖ್ಯ ಅತಿಥಿಗಳಿಗೆ ಸನ್ಮಾನ ಮಾಡಲಾಯಿತು.

ವಿಜಯ ಕರ್ನಾಟಕ, ಬೆಂಗಳೂರು
ಗುರುವಾರ 23 ಫೆಬ್ರವರಿ 2006



ಶೇಷಾದ್ರಿಪುರ ಕಾಲೇಜಿನ ಸುವರ್ಣ ಕರ್ನಾಟಕ ಆಚರಣೆಯನ್ನು ಗಾಯಕ ಶಿವಮೊಗ್ಗ ಸುಬ್ಬಣ್ಣ ಬುಧವಾರ ನಗರದಲ್ಲಿ ಉದ್ಘಾಟಿಸಿದರು. ಪ್ರೊ. ಎಂ. ಕೃಷ್ಣ, ಸಾಹಿತಿ ಪ್ರೊ. ಎಂ.ಎಚ್. ಕೃಷ್ಣಯ್ಯ, ಕವಿ ಪ್ರೊ. ದೊಡ್ಡರಂಗೇಗೌಡ, ಡಾ. ನರಹರಿ ಹಾಗೂ ಬಾಲಸುಬ್ರಹ್ಮಣ್ಯ ಹಾಜರಿದ್ದರು.

ವಿಜಯ ಕರ್ನಾಟಕ

ಭಾನುವಾರ 12.02.2006

# ಹೆಚ್ಚು ಅಂಕ ಗಳಿಕೆಯೊಂದೇ ಬದುಕಿನ ಮಾರ್ಗವಲ್ಲ: ಯಂಡಮೂರಿ

ಬೆಂಗಳೂರು: ಪರೀಕ್ಷೆಗಳಲ್ಲಿ ಗಳಿಸಿದ ಹೆಚ್ಚು ಅಂಕಗಳಷ್ಟೇ ಜೀವನದ ಮಾರ್ಗ ರೂಪಿಸಿಕೊಳ್ಳಲು ಸಹಕಾರಿಯಾಗುವುದಿಲ್ಲ ಎಂದು ಖ್ಯಾತ ಲೇಖಕ ಯಂಡಮೂರಿ ವೀರೇಂದ್ರನಾಥ್ ಹೇಳಿದ್ದಾರೆ.

ಈಗ ಐಟಿ ಕಂಪನಿಗಳು ಯುವಕರನ್ನು ಆಯ್ಕೆ ಮಾಡುವಾಗ ಪರೀಕ್ಷೆಗಳಲ್ಲಿ ಗಳಿಸಿದ ಅಂಕ ನೋಡುವುದಿಲ್ಲ. ಅವರಲ್ಲಿರುವ ಬುದ್ಧಿವಂತಿಕೆ, ನೆನಪಿನಶಕ್ತಿ, ಕ್ರಿಯಾಶೀಲತೆ ಹಾಗೂ ಸಾಮಾನ್ಯಜ್ಞಾನ ಪರೀಕ್ಷಿಸುತ್ತಾರೆ. ನಿಮ್ಮ ಮಕ್ಕಳಿಗೆ ಈ ನಾಲ್ಕು ಗುಣಗಳನ್ನು ಬೆಳೆಸಿಕೊಳ್ಳಲು ಹೇಳಿ. ಆಗ ಅವರು ಸ್ವಯಂಪ್ರೇರಣೆಯಿಂದ ಮುಂದೆ ಬರುತ್ತಾರೆ ಎಂದು ಬುದ್ಧ, ಬಸವ, ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಸಂಯುಕ್ತವಾಗಿ ಏರ್ಪಡಿಸಿದ್ದ ಸಮಾರಂಭದಲ್ಲಿ ಭಾಗವಹಿಸಿ ಹೇಳಿದರು.

ನಾನು ಚಿಕ್ಕವಯಸ್ಸಿನಲ್ಲಿ ಅತ್ಯಂತ ಕಡು ಬಡತನದಲ್ಲಿ ಬೆಳೆದೆ. 5 ಮತ್ತು 6 ನೇ ತರಗತಿಯಲ್ಲಿ ಫೇಲಾಗಿದ್ದೆ. ನನ್ನ ತಾತ ಮುದ್ದಿನಿಂದ ಬೆಳೆಸಿದ್ದರು. ಆಮೇಲೆ ನನ್ನ ತಂದೆ ನನಗೆ ಬುದ್ಧಿವಾದ ಹೇಳಿದರು. ಅದರಿಂದ ನಾನು ಸಿ.ಎ. ಮಾಡಲು ಸಾಧ್ಯವಾಯಿತು. ಈಗ ಐಟಿ ಕಂಪನಿಗಳಿಗೆ ಯುವ ಜನರನ್ನು ಆಯ್ಕೆ ಮಾಡುವ ಕಾರ್ಯ ಕೈಗೊಂಡಿದ್ದೇನೆ. ತಿಂಗಳಿಗೆ 50 ಸಾವಿರ ರೂ. ಸಂಬಳ ನೀಡುವ ಕಂಪನಿ ಯುವಕರಿಂದ ಏನನ್ನು ಅಪೇಕ್ಷಿಸುತ್ತದೆ ಎಂಬುದನ್ನು ತಿಳಿದುಕೊಳ್ಳಬೇಕು ಎಂದರು.

ಬಹುತೇಕ ತಂದೆತಾಯಿಗಳು ತಮ್ಮ ಮಕ್ಕಳು ಸೋಮಾರಿ, ಸರಿಯಾಗಿ ಓದುವುದಿಲ್ಲ, ಓದಿದ್ದು ನೆನಪಿನಲ್ಲಿ ಇರುವುದಿಲ್ಲ ಎಂದು ದೂರುತ್ತಾರೆ. ಇದಕ್ಕೆ ಸರಿಯಾದ ತರಬೇತಿ ಇಲ್ಲದಿರುವುದು ಕಾರಣ. ಸಂಜೆ 6 ಗಂಟೆ ಮೇಲೆ ಎಣ್ಣೆಯಿಂದ ಮಾಡಿದ ವಸ್ತುಗಳು ಹಾಗೂ ಹೆಚ್ಚು ಮಸಾಲೆ ಇರುವ ವಸ್ತುಗಳನ್ನು ಮಕ್ಕಳಿಗೆ ತಿನ್ನಲು ಕೊಡಬೇಡಿ. ಸರಳ ಆಹಾರ ಬೆಳಗ್ಗೆ ಸುಲಭವಾಗಿ ಏಳಲು ಮೂಲ. ಸೋಮಾರಿತನ ಎಂದರೆ ಮಾಡಲೇಬೇಕಾದ ಕಾರ್ಯ ಬಿಟ್ಟು ಬೇರೆ ಕೆಲಸ ಮಾಡುವುದು ಎಂದರು.

ಬುದ್ಧಿವಂತಿಕೆ ಎಂದರೆ ತುಂಬ ಓದಿಕೊಳ್ಳುವುದು ಎಂದರ್ಥವಲ್ಲ. ಬೇರೆಯವರು ಒಂದು ಕೆಲಸವನ್ನು ಮಾಡಲು 15 ನಿಮಿಷ ತೆಗೆದುಕೊಂಡರೆ ನಾನು 5 ನಿಮಿಷದಲ್ಲಿ ಮಾಡುವುದು ಬುದ್ಧಿವಂತಿಕೆ. ನೆನಪಿನಶಕ್ತಿ ಆಸಕ್ತಿಯಿಂದ ಬೆಳೆಯುತ್ತದೆ. ಅದೇರೀತಿ ಯಾವುದೇ ವಿಷಯ ತಿಳಿದಕೂಡಲೇ ಅದಕ್ಕೆ ಪ್ರತಿಕ್ರಿಯಿಸುವುದು ಬಹಳ ಮುಖ್ಯ. ಎಲ್ಲ ರಂಗಗಳ ಬಗ್ಗೆ ಸಾಮಾನ್ಯಜ್ಞಾನ ಇರಬೇಕು. ಬ್ಯಾಂಕ್‌ಗೆ ಹೋಗಿ ವ್ಯವಹಾರ ನಡೆಸುವುದು ಹೇಗೆ ಎಂಬುದನ್ನು ತಿಳಿದುಕೊಂಡಿರಬೇಕು ಎಂದರು.

ಯಂಡಮೂರಿಯವರ 'ಪಾಲಕರಿಗೆ ಗೊತ್ತಿಲ್ಲ, ಶಿಕ್ಷಕರು ಹೇಳೋಲ್ಲ' ಕೃತಿ ಬಿಡುಗಡೆ ಮಾಡಿದ 'ವಿಜಯ ಕರ್ನಾಟಕ' ಪತ್ರಿಕೆಯ ಸಂಪಾದಕ ವಿಶ್ವೇಶ್ವರ ಭಟ್ ಮಾತನಾಡಿ, ವ್ಯಕ್ತಿತ್ವ ವಿಕಸನಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ಸಾಹಿತ್ಯ ಕಡಿಮೆ. ಈ ಕೊರತೆಯನ್ನು ಯಂಡಮೂರಿ ತುಂಬುವ ಕೆಲಸ ಕೈಗೊಂಡಿದ್ದಾರೆ ಎಂದರು.



ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಯಂಡಮೂರಿ ವೀರೇಂದ್ರನಾಥ್, ವಿಶ್ವೇಶ್ವರ ಭಟ್, ಡಬ್ಲ್ಯೂ.ಪಿ.ಕೃಷ್ಣ, ನಲ್ಲೂರು ಪ್ರಸಾದ್ ಮತ್ತು ಈಶ್ವರ ದೈತೋಟ.

ಸಾಹಿತ್ಯ ಸಿದ್ಧಪಡಿಸುವುದರಲ್ಲಿ ಶಿಸ್ತು ಬಹಳ ಮುಖ್ಯ. ಯಂಡಮೂರಿ ಹೇಳಿದ ದಿನಾಂಕಕ್ಕೆ ಸರಿಯಾಗಿ ಸಾಹಿತ್ಯ ಸಿದ್ಧಪಡಿಸುವುದರಲ್ಲಿ ನಿಪುಣರು. ತೆಲುಗಿನ ಸಾಹಿತಿಯಾದರೂ ಕನ್ನಡ ಪತ್ರಿಕೆಗಳಿಗೆ ಇವರು ಸಮೀಪ ಎಂದರು.

ಯಂಡಮೂರಿಯವರ 'ತಪ್ಪು ಮಾಡೋಣ ಬನ್ನಿ' ಕೃತಿಯನ್ನು ಬಿಡುಗಡೆ ಮಾಡಿದ 'ಸಂಯುಕ್ತ ಕರ್ನಾಟಕ' ಸಂಪಾದಕ ಈಶ್ವರ ದೈತೋಟ, ಐಟಿ ರಂಗ ಎಷ್ಟೇ ಬೆಳೆದರೂ ಬರಹಕ್ಕೆ ಇರುವ ಮಹತ್ವ ಕಡಿಮೆಯಾಗುವುದಿಲ್ಲ ಎಂದು ಅಭಿಪ್ರಾಯಪಟ್ಟರು.

ಇದೇ ಸಮಾರಂಭದಲ್ಲಿ ಎಂ.ಜಿ. ಸತ್ಯನಾರಾಯಣ ಅವರ 'ಮುಂಗಾರು' ಕೃತಿ ಬಿಡುಗಡೆಯಾಯಿತು. ವೂಡೆ ಪಿ. ಕೃಷ್ಣ ಅವರನ್ನು ಸನ್ಮಾನಿಸಲಾಯಿತು. ಡಾ. ನಲ್ಲೂರು ಪ್ರಸಾದ್ ಅಧ್ಯಕ್ಷತೆ ವಹಿಸಿದ್ದರು. ಎಸ್. ರಾಮಲಿಂಗೇಶ್ವರ ಸ್ವಾಗತಿಸಿದರು.

# ಈ ಸಂಜೆ



ಸಿದ್ದನಹಳ್ಳಿ ಬುದ್ಧ, ಬಸವ, ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ನಡೆದ ಸುವರ್ಣ ಕರ್ನಾಟಕ ರಾಜ್ಯೋತ್ಸವ ಕಾರ್ಯಕ್ರಮವನ್ನು ಶಿಕ್ಷಣ ತಜ್ಞ ವೂಡೆ.ಪಿ.ಕೃಷ್ಣ ಉದ್ಘಾಟಿಸಿದರು. ಡಾ. ನಲ್ಲೂರು ಪ್ರಸಾದ್, ಯಂಡಮೂರಿ ವೀರೇಂದ್ರನಾಥ್, ಪತ್ರಕರ್ತರಾದ ವಿಶ್ವೇಶ್ವರಭಟ್, ಈಶ್ವರ ದೈತೋಟ ಹಾಗೂ ಎಸ್. ರಾಮಲಿಂಗೇಶ್ವರ ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ
ಬುಧವಾರ 8 ಫೆಬ್ರವರಿ 2006



ಯಲಹಂಕ ನ್ಯೂಟೌನ್ ಶೇಷಾದ್ರಿಪುರ ಪದವಿಪೂರ್ವ ಕಾಲೇಜಿನ ಕಲಾ[illegible]ಪದ ವಾರ್ಷಿಕ ದಿನಾಚರಣೆ ಕಾರ್ಯಕ್ರಮದಲ್ಲಿ ಟ್ರಸ್ಟ್ ಕಾರ್ಯದರ್ಶಿ ಡಬ್ಲ್ಯೂ.ಪಿ. ಕೃಷ್ಣ, ಟ್ರಸ್ಟಿ ಸರೋಜಾ ನಂಜಪ್ಪ, ಲೇಖಕ ಎಂ.ಎಸ್. ನರಸಿಂಹಮೂರ್ತಿ ಹಾಗೂ ಪದವಿ ಕಾಲೇಜಿನ ಪ್ರಾಂಶುಪಾಲ ಡಾ. ಪ್ರಕಾಶ್ ಭಾಗವಹಿಸಿದ್ದರು.

# ನೇತಾಜಿ ಸುಭಾಷ್ ಚಂದ್ರ ಜನ್ಮದಿನೋತ್ಸವ

ಬೆಂಗಳೂರು: ನೇತಾಜಿ ಸೇವಾಶ್ರಮ ಟ್ರಸ್ಟ್ ಆಶ್ರಯದಲ್ಲಿ ವಿಧಾನಸೌಧ ಮುಂಭಾಗದಲ್ಲಿರುವ ನೇತಾಜಿ ಸುಭಾಷ್ ಚಂದ್ರ ಬೋಸ್ ಪ್ರತಿಮೆ ಮುಂಭಾಗದಲ್ಲಿ ನೇತಾಜಿಯವರ 109ನೇ ಜನ್ಮದಿನೋತ್ಸವ ಆಚರಿಸಲಾಯಿತು.

ಈ ಸಂದರ್ಭದಲ್ಲಿ, ಅಮೆರಿಕದಲ್ಲಿ ನೆಲೆಸಿರುವ ತಮ್ಮ ಗಳಿಕೆಯ ಬಹು ಭಾಗವನ್ನು ಕರ್ನಾಟಕದ ಗ್ರಾಮೀಣ ಜನರ ವಿದ್ಯಾಭ್ಯಾಸ, ಆರೋಗ್ಯ ನೈರ್ಮಲ್ಯ, ವಸತಿ ಹಾಗೂ ಇತರ ಅಗತ್ಯ ಪೂರೈಸಲು ವ್ಯಯಿಸುತ್ತಿರುವ ಮಾನವೀಯತೆಯ ಹರಿಕಾರ ಹಾಗೂ ಶಿಕ್ಷಣ ತಜ್ಞ, ಬೆಂಗಳೂರು ತಿಮ್ಮಯ್ಯ ಲಕ್ಷ್ಮಣ್ ಅವರಿಗೆ 'ನೇತಾಜಿ ಸೇವಾ ಪ್ರಶಸ್ತಿ-2006' ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು.



ನೇತಾಜಿ ಸೇವಾಶ್ರಮ ಟ್ರಸ್ಟ್ ಏರ್ಪಡಿಸಿದ್ದ ನೇತಾಜಿಯವರ 109ನೇ ಜನ್ಮದಿನೋತ್ಸವ ಸಮಾರಂಭದಲ್ಲಿ ಬಿ.ಟಿ. ಲಕ್ಷ್ಮಣ್‌ರನ್ನು ಸನ್ಮಾನಿಸಲಾಯಿತು. ಬಿ.ಎನ್. ಬಚ್ಚೇಗೌಡ, ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮೀಜಿ, ಟಿ. ವೆಂಕಟೇಶ್, ಡಬ್ಲ್ಯು.ಪಿ. ಕೃಷ್ಣ, ಎಸ್. ಲಕ್ಕಣ್ಣ ಹಾಜರಿದ್ದರು.

ಶ್ರೀ ನಿಡುಮಾಮಿಡಿ ಮಾನವ ಧರ್ಮಸಂಸ್ಥಾನ ಪೀಠಾಧ್ಯಕ್ಷ ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮೀಜಿ ಕಾರ್ಯಕ್ರಮದ ದಿವ್ಯ ಸಾನ್ನಿಧ್ಯ ವಹಿಸಿದ್ದರು. ಕರ್ನಾಟಕ ವಿಧಾನಸಭಾಧ್ಯಕ್ಷ ಕೃಷ್ಣ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿ, ನೇತಾಜಿ ಅವರ ಆದರ್ಶಗಳನ್ನು ಪಾಲಿಸುವಂತೆ ಕರೆ ನೀಡಿದರು.

ಜಾನಪದ ಗಾಯಕ ಎಂ.ಕೆ. ಸಿದ್ದರಾಜು ಅವರ ದೇಶಭಕ್ತಿ ಗೀತೆಗಳ ಗಾಯನದೊಂದಿಗೆ ಕಾರ್ಯಕ್ರಮ ಆರಂಭವಾಯಿತು. ಮಾಜಿ ಸಚಿವ ಬಿ.ಎನ್. ಬಚ್ಚೇಗೌಡ, ಕರ್ನಾಟಕ ಸ್ವಾಭಿಮಾನಿ ವೇದಿಕೆ ಕೋಶಾಧಿಕಾರಿ ನಾ. ಮಲ್ಲಿಕಾರ್ಜುನ, ಶೇಷಾದ್ರಿಪುರ ಶಿಕ್ಷಣದತ್ತಿ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಪಿ. ಕೃಷ್ಣ, ಹಿರಿಯ ಸಹಕಾರಿ ಆರ್. ಕೃಷ್ಣ, ಮಾಜಿ ಕಾರ್ಪೊರೇಟರ್ ನಳಿನಿ ಮಹಾದೇವಸ್ವಾಮಿ ಮತ್ತಿತರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಉಪನ್ಯಾಸಕಿ ಅನುಪಮಾ ನಿರೂಪಿಸಿದರು. ಟ್ರಸ್ಟ್‌ನ ಸಂಸ್ಥಾಪಕ ಕಾರ್ಯದರ್ಶಿ ಎಸ್. ಲಕ್ಕಣ್ಣ ಸ್ವಾಗತಿಸಿದರು. ಟ್ರಸ್ಟ್ ವತಿಯಿಂದ ಮಾಗಡಿ ರಸ್ತೆಯ ಕುಷ್ಠರೋಗ ಆಸ್ಪತ್ರೆಯ 150 ಮಂದಿ ಒಳರೋಗಿಗಳಿಗೆ ಹಣ್ಣು, ಬ್ರೆಡ್ ವಿತರಿಸಲಾಯಿತು. ಉಪ ಮೇಯರ್ ಲಕ್ಷ್ಮೀನಾರಾಯಣ, ಆಡಳಿತ ಪಕ್ಷದ ನಾಯಕ ರವೀಂದ್ರ, ಹೊಸಪೇಟೆಯ ಮಹಾಂತಪ್ಪ ಮತ್ತು ಆಸ್ಪತ್ರೆಯ ಅಧಿಕಾರಿಗಳು ಉಪಸ್ಥಿತರಿದ್ದರು.

ಉದಯವಾಣಿ
ನಮ್ಮ ಬೆಂಗಳೂರು
ಸೋಮವಾರ ಜನವರಿ 30, 2006

# ನೇತಾಜಿ ಸೇವಾ ಪ್ರಶಸ್ತಿ ಪ್ರದಾನ



ಬೆಂಗಳೂರು

ನೇತಾಜಿ ಸುಭಾಸ್‌ಚಂದ್ರ ಬೋಸ್ ಅವರ 109ನೇ ಜನ್ಮದಿನೋತ್ಸವದ ಅಂಗವಾಗಿ ನೇತಾಜಿ ಸೇವಾಶ್ರಮ ಟ್ರಸ್ಟ್ ಆಶ್ರಯದಲ್ಲಿ ಇತ್ತೀಚೆಗೆ ವಿಧಾನಸೌಧದ ಮುಂಭಾಗದಲ್ಲಿ ನಡೆದ ಸಮಾರಂಭದಲ್ಲಿ ಶಿಕ್ಷಣತಜ್ಞ *ಬೆಂಗಳೂರು ತಿಮ್ಮಯ್ಯ ಲಕ್ಷ್ಮಣ್* ಅವರಿಗೆ 2006ರ ಸಾಲಿನ ನೇತಾಜಿ ಸೇವಾ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು.

ಸಮಾರಂಭಕ್ಕೆ ವೀರಭದ್ರ ಚನ್ನಮಲ್ಲ ಸ್ವಾಮೀಜಿ ಸಾನಿಧ್ಯ ವಹಿಸಿದ್ದರು. ಕರ್ನಾಟಕ ವಿಧಾನ ಸಭಾಧ್ಯಕ್ಷ ಕೃಷ್ಣ ಅವರು ಅಧ್ಯಕ್ಷತೆ ವಹಿಸಿದ್ದರು. ಮಾಜಿ ಸಚಿವ ಬಿ.ಎನ್. ಬಚ್ಚೇಗೌಡ, ಕರ್ನಾಟಕ ಸ್ವಾಭಿಮಾನಿ ವೇದಿಕೆ ಕೋಶಾಧಿಕಾರಿ ಮಲ್ಲಿಕಾರ್ಜುನ, ಶೇಷಾದ್ರಿಪುರಂ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಮಾಜಿ ಕಾರ್ಪೋರೇಟರ್ ನಳಿನಿ ಮಹಾದೇವಸ್ವಾಮಿ, ಬಿಟಿಎಲ್ ಶಿಕ್ಷಣ ಸಂಸ್ಥೆಗಳ ಕಾರ್ಯಾಧ್ಯಕ್ಷ ಟಿ. ವೆಂಕಟೇಶ್ ಮುಂತಾದವರು ಅತಿಥಿಗಳಾಗಿ ಭಾಗವಹಿಸಿದ್ದರು.

ವೀರಭದ್ರ ಚನ್ನಮಲ್ಲ ಸ್ವಾಮೀಜಿ, ಸ್ಪೀಕರ್ ಕೃಷ್ಣ ಮತ್ತಿತರರು ಮಾತನಾಡಿ, ನೇತಾಜಿ ಅವರ ಆದರ್ಶಗಳನ್ನು ಪಾಲಿಸುವಂತೆ ಕರೆ ನೀಡಿದರು. ಅಮೆರಿಕದಲ್ಲಿದ್ದರೂ ಕನ್ನಡ ಜನರ ಹಿತಕ್ಕಾಗಿ ಸದಾ ಶ್ರಮಿಸುತ್ತಿರುವ ಬಿ.ಟಿ. ಲಕ್ಷ್ಮಣ್ ಅವರನ್ನು ಮುಕ್ತ ಕಂಠದಿಂದ ಪ್ರಶಂಶಿಸಿದರು.

ಈ ಸಂದರ್ಭದಲ್ಲಿ ಟ್ರಸ್ಟ್ ವತಿಯಿಂದ ಮಾಗಡಿ ರಸ್ತೆಯ ಕುಷ್ಠರೋಗ ಆಸ್ಪತ್ರೆಯ ಒಳರೋಗಿಗಳಿಗೆ ಹಣ್ಣು, ಬ್ರೆಡ್ ವಿತರಿಸಲಾಯಿತು. ಬೆಂಗಳೂರು ಮಹಾನಗರ ಪಾಲಿಕೆಯ ಉಪ ಮಹಾಪೌರ ಎಂ. ಲಕ್ಷ್ಮೀನಾರಾಯಣ ಮತ್ತು ಆಸ್ಪತ್ರೆಯ ಅಧಿಕಾರಿಗಳು ಉಪಸ್ಥಿತರಿದ್ದರು.

ಸಂಜೆ ವಾಣಿ

ಭಾನುವಾರ 29 ಜನವರಿ 2006

# ಸುಭಾಷ್ ಬೋಸ್ ಆದರ್ಶ ಪಾಲಿಸಲು ಸ್ಪೀಕರ್ ಕರೆ

ಬೆಂಗಳೂರು, ಜ. ೨೯- ನೇತಾಜಿ ಸುಭಾಷ್ ಚಂದ್ರಬೋಸ್ ಅವರ ಆದರ್ಶಗಳನ್ನು ಪಾಲಿಸುವಂತೆ ವಿಧಾನಸಭಾಧ್ಯಕ್ಷ ಕೃಷ್ಣ ಕರೆ ನೀಡಿದರು.

ನೇತಾಜಿ ಸೇವಾಶ್ರಮ ಟ್ರಸ್ಟ್ ಆಯೋಜಿಸಿದ್ದ ನೇತಾಜಿ ಅವರ 109ನೇ ಜನ್ಮ ದಿನೋತ್ಸವದಲ್ಲಿ ಅಮೇರಿಕಾದ ಕನ್ನಡಿಗ ಬಿ.ಟಿ. ಲಕ್ಷ್ಮಣ್ ಅವರಿಗೆ ನೇತಾಜಿ ಸೇವಾ ಪ್ರಶಸ್ತಿ- 2006 ಪ್ರಶಸ್ತಿ ನೀಡಿ ಸನ್ಮಾನಿಸಿದ ನಂತರ ಮಾತನಾಡಿದರು.

ಅಮೇರಿಕಾದಲ್ಲಿದ್ದರೂ ಕನ್ನಡಿಗರ ಹಿತಕ್ಕೆ ಶ್ರಮಿಸುತ್ತಿರುವ ಲಕ್ಷ್ಮಣ್ ಅವರ ಕಾರ್ಯ ಶ್ಲಾಘನೀಯ ಎಂದು ಹೇಳಿದರು.

ನಿಡುಮಾಮಿಡಿ ಮಾನವ ಧರ್ಮಪೀಠದ ಅಧ್ಯಕ್ಷ ವೀರಭದ್ರ ಚನ್ನಮಲ್ಲ ಸ್ವಾಮೀಜಿ ಸಾನಿಧ್ಯ ವಹಿಸಿದ್ದರು.

ಮಾಜಿ ಸಚಿವ ಬಿ.ಎನ್. ಬಚ್ಚೇಗೌಡ, ಶೇಷಾದ್ರಿಪುರ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಮಾಜಿ ಪಾಲಿಕೆ ಸದಸ್ಯೆ ನಳಿನಿ ಮಹಾದೇವಸ್ವಾಮಿ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

ನಂತರ ಮಾಗಡಿ ರಸ್ತೆಯ ಕುಷ್ಠರೋಗ ಆಸ್ಪತ್ರೆಯ ಒಳರೋಗಿಗಳಿಗೆ ಹಣ್ಣು ಹಂಪಲು ವಿತರಿಸಲಾಯಿತು. ಈ ಸಂದರ್ಭದಲ್ಲಿ ಪಾಲಿಕೆ ಉಪಮೇಯರ್, ಆಡಳಿತ ಪಕ್ಷದ ನಾಯಕ ಎಚ್. ರವೀಂದ್ರ ಸೇರಿದಂತೆ ಮತ್ತಿತರರಿದ್ದರು.



ನೇತಾಜಿ ಸುಭಾಷ್ ಚಂದ್ರಬೋಸ್ ಅವರ 109ನೇ ಜನ್ಮ ದಿನಾಚರಣೆ ಅಂಗವಾಗಿ ಅಮೇರಿಕಾ ಕನ್ನಡಿಗ ಬಿ.ಟಿ. ಲಕ್ಷ್ಮಣ್ ಅವರನ್ನು ವಿಧಾನಸಭಾಧ್ಯಕ್ಷ ಕೃಷ್ಣ ಸನ್ಮಾನಿಸಿದರು. ಮಾಜಿ ಸಚಿವ ಬಿ.ಎನ್. ಬಚ್ಚೇಗೌಡ, ವೀರಭದ್ರ ಚನ್ನಮಲ್ಲ ಸ್ವಾಮೀಜಿ, ವೂಡೇ ಪಿ. ಕೃಷ್ಣ ಸೇರಿದಂತೆ ಮತ್ತಿತರರಿದ್ದಾರೆ.

ಈ ಸಂಜೆ

ಪುಟ ೪ ಶನಿವಾರ ೨೮-೧-೨೦೦೬



ನಗರದ ನೇತಾಜಿ ಸೇವಾಶ್ರಮ ಟ್ರಸ್ಟ್ ಹಮ್ಮಿಕೊಂಡಿದ್ದ ನೇತಾಜಿ ಸುಭಾಷ್‌ಚಂದ್ರಬೋಸ್ ಜನ್ಮದಿನಾಚರಣೆ ಸಮಾರಂಭದಲ್ಲಿ ಶಿಕ್ಷಣ ತಜ್ಞ ಬಿ.ಟಿ.ಲಕ್ಷ್ಮಣ್ ಅವರಿಗೆ 'ನೇತಾಜಿ ಸೇವಾ ಪ್ರಶಸ್ತಿ-2006' ಪ್ರದಾನ ಮಾಡಿದ ಸಂದರ್ಭದಲ್ಲಿ ಸ್ಪೀಕರ್ ಕೃಷ್ಣ, ಮಾಜಿ ಸಚಿವ ಬಿ.ಎನ್. ಬಚ್ಚೇಗೌಡ, ನಿಡುಮಾಮಿಡಿ ಸಂಸ್ಥಾನದ ಪೀಠಾಧ್ಯಕ್ಷರಾದ ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮೀಜಿ, ಟ್ರಸ್ಟ್‌ನ ಎಸ್.ಲಕ್ಕಣ್ಣ, ಕೃಷ್ಣ ಮುಂತಾದವರು ಹಾಜರಿದ್ದರು.

ಬೆಂಗಳೂರು ವಿಜಯ
ಮಂಗಳವಾರ 24 ಜನವರಿ 2006



# 'ರಾಷ್ಟ್ರೀಯ ಯುವಕರ ದಿನ' ಆಚರಣೆ

ಬೆಂಗಳೂರು: ಸ್ವಾಮಿ ವಿವೇಕಾನಂದ ಜನ್ಮದಿನದ ಅಂಗವಾಗಿ ಶೇಷಾದ್ರಿಪುರ ಶಿಕ್ಷಣ ದತ್ತಿ ಪ್ರಾಂಗಣದಲ್ಲಿ 'ರಾಷ್ಟ್ರೀಯ ಯುವಕರ ದಿನ'ವನ್ನು ಇತ್ತೀಚೆಗೆ ಆಚರಿಸಲಾಯಿತು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಶೇಷಾದ್ರಿಪುರ ಶಿಕ್ಷಣ ದತ್ತಿ ಅಧ್ಯಕ್ಷ ಕೆ.ಎಂ. ನಂಜಪ್ಪ ಮಾತನಾಡಿ, ಪ್ರಾಣಾ ಮಾತಾಜಿಯವರು, ಸ್ವಶಕ್ತಿಯಲ್ಲಿ ನಂಬಿಕೆ, ಜೀವ, ಶಿವ ಸೇವೆ ಮತ್ತು ಅವಗುಣಗಳಿಂದ ದೂರ ಇರುವ ಮನೋಬಲಗಳನ್ನು ಬೆಳೆಸಿಕೊಳ್ಳಬೇಕೆಂದು ವಿದ್ಯಾರ್ಥಿಗಳಿಗೆ ಕರೆ ನೀಡಿದರು.

ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಜಂಟಿ ಕಾರ್ಯದರ್ಶಿ ಎ.ಆರ್. ವೂಡೆ ಪಿ. ಕೃಷ್ಣ ಹಾಗೂ ಗೌರವ ಶ್ರೀನಿವಾಸಯ್ಯ, ಶೇಷಾದ್ರಿಪುರ



ಸ್ವಾಮಿ ವಿವೇಕಾನಂದರ ಜನ್ಮ ದಿನದ ಅಂಗವಾಗಿ ಶೇಷಾದ್ರಿಪುರ ಶಿಕ್ಷಣ ದತ್ತಿ ಪ್ರಾಂಗಣದಲ್ಲಿ 'ರಾಷ್ಟ್ರೀಯ ಯುವಕರ ದಿನ' ಆಚರಣೆ ಸಂದರ್ಭದಲ್ಲಿ ಆಯೋಜಿಸಲಾಗಿದ್ದ ಪುಸ್ತಕ ಪ್ರದರ್ಶನದಲ್ಲಿ ವಿದ್ಯಾರ್ಥಿಗಳು.

ಬಾಲಕಿಯರ ಪ್ರೌಢಶಾಲೆಯ ಪ್ರಭಾರಿ ಮುಖ್ಯೋಪಾಧ್ಯಾಯಿನಿ ವಿನಯಾ ಸುವರ್ಣ ಮತ್ತು ಸ್ತ್ರೀ ಸಮಾಜ ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯಿನಿ ಎಂ. ಗೀತಾ ಮತ್ತಿತರರು ಉಪಸ್ಥಿತರಿದ್ದರು.

ವಿಜ್ಞಾನ ಶಿಕ್ಷಕ ಅರವಿಂದ ಬಿ. ಕಟ್ಟಿ ಕಾರ್ಯಕ್ರಮ ನಿರೂಪಿಸಿದರು. ಶೇಷಾದ್ರಿಪುರ ಬಾಲಕರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯ ಎಚ್.ಎನ್. ಶಿವಕುಮಾರ ಆರಾಧ್ಯ ಸ್ವಾಗತಿಸಿದರು. ಬಿ.ಎಸ್. ಗೀತಾ ವಂದಿಸಿದರು.

ಇದೇ ಸಂದರ್ಭದಲ್ಲಿ ಕುವೆಂಪು ರಂಗ ಮಂದಿರದಲ್ಲಿ ಪುಸ್ತಕಗಳ ಪ್ರದರ್ಶನ ಮತ್ತು ಮಾರಾಟ ಮಳಿಗೆ ತೆರೆಯಲಾಗಿತ್ತು. ವಿವೇಕಾನಂಧರ ಜೀವನಕ್ಕೆ ಸಂಬಂಧಿಸಿದಂತಹ ಹಲವು ಘಟನೆಗಳನ್ನು ನೆನಪಿಗೆ ತರುವ ಚಿತ್ರಪಟಗಳ ಪ್ರದರ್ಶನವೂ ಏರ್ಪಡಿಸಲಾಗಿತ್ತು.

ಕೆಲವು ವಿದ್ಯಾರ್ಥಿಗಳು ಸ್ವಾಮಿ ವಿವೇಕಾನಂದರ ಜೀವನ ಮತ್ತು ಬೋಧನೆಗಳ ಬಗ್ಗೆ ವಿವರವಾಗಿ ಮಾತನಾಡಿದರು.

ಶೇಷಾದ್ರಿಪುರ ಸ್ತ್ರೀ ಸಮಾಜ ಮಾಧ್ಯಮಿಕ ಶಾಲೆ, ಶೇಷಾದ್ರಿಪುರ ಬಾಲಕರ ಪ್ರೌಢಶಾಲೆ ಮತ್ತು ಶೇಷಾದ್ರಿಪುರ ಬಾಲಕಿಯರ ಪ್ರೌಢಶಾಲೆ ಮೂರು ಸಂಸ್ಥೆಗಳು ಒಟ್ಟುಗೂಡಿ ಕಾರ್ಯಕ್ರಮ ಸಂಯೋಜನೆ ಮಾಡಲಾಗಿತ್ತು.

ಉಷಾ ಕಿರಣ | ಮಂಗಳವಾರ | ಜನವರಿ 24 | 2006

# ನೇತಾಜಿ ರಾಷ್ಟ್ರಪ್ರೇಮ ಸರ್ವಕಾಲಕ್ಕೂ ಮಾದರಿ

ನೇತಾಜಿ ಸುಭಾಷ್ ಚಂದ್ರಬೋಸ್‌ರವರ ರಾಷ್ಟ್ರಪ್ರೇಮ ಸರ್ವಕಾಲಕ್ಕೂ ಮಾದರಿ ಎಂದು ನಿಡುಮಾಮಿಡಿ ಮಠದ ವೀರಭದ್ರ ಚನ್ನಮಲ್ಲ ಸ್ವಾಮೀಜಿ ತಿಳಿಸಿದ್ದಾರೆ.

ಸೋಮವಾರ ವಿಧಾನಸೌಧದ ಉತ್ತರ ಭಾಗದಲ್ಲಿರುವ ನೇತಾಜಿ ಸೇವಾಶ್ರಮ ಟ್ರಸ್ಟ್ ಏರ್ಪಡಿಸಿದ್ದ 'ಸುಭಾಷ್ ಚಂದ್ರಬೋಸ್‌ರವರ 109ನೇ ಜನ್ಮ ದಿನಾಚರಣೆ' ಸಮಾರಂಭದಲ್ಲಿ ನೇತಾಜಿ ಭಾವಚಿತ್ರಕ್ಕೆ ಮಾಲಾರ್ಪಣೆ ಮಾಡಿದ ನಂತರ ಅವರು ಹೇಳಿದ್ದು:

ಪ್ರತಿ ವರ್ಷ ಮಹನೀಯರ ಜನ್ಮ ದಿನಾಚರಣೆ ಆಗುತ್ತಿದ್ದರೂ ಗಾಂಧೀಜಿ ಹೊರತುಪಡಿಸಿ ನೇತಾಜಿ, ಅಜಾದ್ ಮತ್ತು ಭಗತ್‌ಸಿಂಗ್‌ರಂತಹ ಕ್ರಾಂತಿ ಪುರುಷರ ಸ್ಮರಣೆ ಕಡಿಮೆಯಾಗುತ್ತಿದೆ. ಹೊಸ ಮಠ, ದೇವಸ್ಥಾನಗಳನ್ನು ನಿರ್ಮಿಸುವ ಬದಲು ಪ್ರಸ್ತುತವಿರುವ ದೇವಸ್ಥಾನ, ಮಸೀದಿ ಮತ್ತು ಮಠಗಳನ್ನು ಕಾಪಾಡಿಕೊಳ್ಳುವುದರ ಜತೆಗೆ ಆಸ್ಪತ್ರೆ ಮತ್ತು ಅನಾಥಾಲಯಗಳನ್ನು ನಿರ್ಮಿಸಬೇಕು ಎಂದು ಸ್ವಾಮೀಜಿ ಹೇಳಿದರು.

ವಿಧಾನಸಭೆ ಸಭಾಧ್ಯಕ್ಷ ಕೃಷ್ಣ ಮಾತನಾಡಿ, ಗಾಂಧಿ ಮತ್ತು ನೇತಾಜಿಯಂತಹ ಆದರ್ಶ ನಾಯಕರು ಆಧುನಿಕ ಜಗತ್ತಿನಲ್ಲಿ ಇಲ್ಲದಿರುವುದರಿಂದ ಯುವಕರು ಸ್ವಾರ್ಥ ಮನೋಭಾವ ಹೊಂದುತ್ತಿದ್ದಾರೆ ಎಂದರು.

ಮಾಜಿ ಸಚಿವ ಬಿ.ಎನ್. ಬಚ್ಚೇಗೌಡ ಮಾತನಾಡಿ, ನೇತಾಜಿ ಹೆಸರೇ ಯುವಕರಲ್ಲಿ ಸ್ಫೂರ್ತಿ ಮೂಡಿಸುವುದರ ಜತೆಗೆ ದೇಶಪ್ರೇಮವನ್ನು ಮೂಡಿಸುತ್ತದೆ. ಪ್ರಸಕ್ತ ರಾಜಕೀಯ ಬೆಳವಣಿಗೆಗಳ ಗಮನಿಸಿದರೆ ಸ್ವಾರ್ಥ ರಾಜಕೀಯ ತಾಂಡವವಾಡುತ್ತಿದೆ ಎಂದರು.

ಇದೇ ಸಂದರ್ಭದಲ್ಲಿ ಬೊಮ್ಮಸಂದ್ರದ ಬಿಟಿಎಲ್ ಎಜುಕೇಶನ್ ಟ್ರಸ್ಟ್‌ನ ಸಂಸ್ಥಾಪಕ ಟಿ. ಲಕ್ಷ್ಮರವರಿಗೆ 'ನೇತಾಜಿ ಸೇವಾ ಪ್ರಶಸ್ತಿ-2006' ನೀಡಿ ಗೌರವಿಸಲಾಯಿತು. ನೇತಾಜಿ ಸೇವಾ ಪ್ರಶಸ್ತಿ-2005 ಪುರಸ್ಕೃತರ ಬಗೆಗಿನ ಹೊತ್ತಗೆ 'ಬಹುಮುಖಿ ಪ್ರತಿಭಾವಂತರು'ವನ್ನು ವೀರಭದ್ರ ಚನ್ನಮಲ್ಲ ಸ್ವಾಮೀಜಿ ಬಿಡುಗಡೆಗೊಳಿಸಿದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರದ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಟ್ರಸ್ಟ್‌ನ ಸಂಸ್ಥಾಪಕ ಎಸ್. ಲಕ್ಕಣ್ಣ ಉಪಸ್ಥಿತರಿದ್ದರು.



'ನೇತಾಜಿ ಸುಭಾಷ್ ಚಂದ್ರಬೋಸ್‌ರ 109ನೇ ಜನ್ಮ ದಿನಾಚರಣೆ' ಅಂಗವಾಗಿ 'ಬಹುಮುಖಿ ಪ್ರತಿಭಾವಂತರು' ಕಿರು ಹೊತ್ತಿಗೆಯನ್ನು ನಿಡುಮಾಮಿಡಿ ಮಠದ ವೀರಮಲ್ಲ ಚನ್ನಮಲ್ಲ ಸ್ವಾಮೀಜಿ ಬಿಡುಗಡೆ ಮಾಡಿದರು. ಮಾಜಿ ಸಚಿವ ಬಿ.ಎನ್. ಬಚ್ಚೇಗೌಡ, ಸಭಾಧ್ಯಕ್ಷ ಕೃಷ್ಣ ಮತ್ತು ಬಿಟಿಎಲ್ ಸಂಸ್ಥೆಯ ಸಂಸ್ಥಾಪಕ ಟಿ. ಲಕ್ಷ್ಮಣ್ ಭಾಗವಹಿಸಿದ್ದರು.

ಈ ಸಂಜೆ

ಪುಟ ೫ ಸೋಮವಾರ ೨೩-೧-೨೦೦೬



ತಾಜಿ ಸುಭಾಷ್‌ಚಂದ್ರ ಬೋಸ್‌ರ 109ನೆ ಜನ್ಮ ದಿನ ದಿನಾಚರಣೆ ಅಂಗವಾಗಿ ನಗರದ ಕುಷ್ಟರೋಗಿಗಳ ಆಸ್ಪತ್ರೆಯಲ್ಲಿ ಉಪಮೇಯರ್ ಎನ್. ಲಕ್ಷ್ಮೀನಾರಾಯಣ ಅವರು ರೋಗಿಗಳಿಗೆ ಹಣ್ಣು ಮತ್ತು ಬ್ರೆಡ್‌ಗಳನ್ನು ವಿತರಿಸಿದರು.

ರಾಜ್ಯಪ್ರಗತಿ

10-1-2006

# ವ್ಯಕ್ತಿತ್ವ ವಿಕಸನ- ಕಾರ್ಯಾಗಾರ




ಶೇಷಾದ್ರಿಪುರ ಪ್ರಿಯೂನಿವರ್ಸಿಟಿ ಕಾಲೇಜ್, ಯಲಹಂಕ-ಇಲ್ಲಿ ಇತ್ತೀಚೆಗೆ ಮೂರು ದಿನಗಳ ವ್ಯಕ್ತಿತ್ವ ವಿಕಸನ ಕಾರ್ಯಾಗಾರವನ್ನು ಹಮ್ಮಿಕೊಳ್ಳಲಾಗಿತ್ತು. ತುಮಕೂರಿನ ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮದ ಸ್ವಾಮಿ ವೀರೇಶಾನಂದ ಸರಸ್ವತಿ ಮಹಾರಾಜ್ ಅವರು ಕಮ್ಮಟವನ್ನು ಉದ್ಘಾಟಿಸಿದರು. ನೇತ್ರಾಮಣಿ, ಶೇಷಾದ್ರಿಪುರ ಶಿಕ್ಷಣದತ್ತಿಯ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಪಿ.ಕೃಷ್ಣ ಮತ್ತು ಕಾಲೇಜಿನ ಪ್ರಾಂಶುಪಾಲರಾದ ಉಮಾದೇವಿ ಚಿತ್ರದಲ್ಲಿದ್ದಾರೆ.

(ಕೃಪೆ: ವಾಣಿ, ಶೈಕ್ಷಣಿಕ ಸಾಂಸ್ಕೃತಿಕ ಪತ್ರಿಕೆ)